ನವಸಾಕ್ಷರ ಪುಸ್ತಕ ಮಾಲೆ ೪೩

# ನೀಲಕುಮಾರನ ಕಥೆ

ಎಚ್. ಬಾಲರಾಜು






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ನವಸಾಕ್ಷರ ಪುಸ್ತಕ ಮಾಲೆ

ಅಧ್ಯಕ್ಷರು

**ಡಾ. ಚಂದ್ರಶೇಖರ ಕಂಬಾರ**

ಕುಲಪತಿಗಳು, ಕನ್ನಡ ವಿಶ್ವವಿದ್ಯಾಲಯ

**ಶ್ರೀ ಲೂಕೋಸ್ ವಲ್ಲತರೈ** ಐ. ಎ. ಎಸ್.

ನಿರ್ದೇಶಕರು, ಲೋಕಶಿಕ್ಷಣ ನಿರ್ದೇಶನಾಲಯ

**ಉನ್ನತ ಸಲಹಾ ಸಮಿತಿ ಸದಸ್ಯರು**



ಅಮೃತ ಸೋಮೇಶ್ವರ

ಸಿ. ಆರ್. ಚಂದ್ರಶೇಖರ್

ಬಿ. ಎ. ಶ್ರೀಧರ

ಲಿಂಗದೇವರು ಹಳೆಮನೆ

ಭ. ಮಲ್ಲಿಕಾರ್ಜುನ

ಮಹಾಬಲೇಶ್ವರರಾವ್

ಭಕ್ತಪ್ರಿಯ

ಎಂ. ಪಿ. ಪರಮಶೇಖರಯ್ಯ

ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ

ನವಸಾಕ್ಷರ ಪುಸ್ತಕ ಮಾಲೆ - ೪೩

# ನೀಲಕುಮಾರನ ಕಥೆ

ಎಚ್. ಬಾಲರಾಜು







ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೭೭

NEELAKUMARANA KATHE : by H. Balaraju. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---



**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

ಮುದ್ರಕರು
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
೮/೧, ಮಾರೇನಹಳ್ಳಿ ೧ನೇ ಕ್ರಾಸ್, ೨೩ನೇ ಮೇನ್,
ಜೆ.ಪಿ.ನಗರ, ಬೆಂಗಳೂರು-೫೬೦ ೦೭೮.
ಫೋನ್: ೬೪೨೧೦೨



# ನೀಲಕುಮಾರನ ಕತೆ

ಅಲಕಾವತಿ ಎಂಬ ಪಟ್ಟಣದಲ್ಲಿ ಚಿತ್ರಶೇಖರನೆಂಬ ರಾಜನಿದ್ದ. ಅವನಿಗೆ ಮಕ್ಕಳಾಗಿರಲಿಲ್ಲ. ಈ ಕೊರಗಿನಲ್ಲಿಯೇ ನೆಲ ಹಿಡಿದ. ಪಕ್ಕದ ರಾಜ್ಯದ ಅರಸ ಭದ್ರಶೇಖರನಿಗೆ ಕಪ್ಪಕಾಣಿಕೆ ಕೊಡುವುದು ಮರೆತುಬಿಟ್ಟ. ದೈವಶಕ್ತಿಯಿಂದ ಆತನಿಗೆ ಒಂದು ದಿನ ಮಕ್ಕಳ ಫಲ ದೊರಕಿತು. ಚಿತ್ರಶೇಖರ ರಾಜನಿಗೆ ಆನಂದವಾಯಿತು. ಗಂಡು ಮಗುವಿನ ಹುಟ್ಟಿನ ಸಡಗರ ಪಟ್ಟಣದಲ್ಲಿ ಆಚರಿಸುತ್ತಿರುವಾಗ ಇತ್ತ ಭದ್ರಶೇಖರ ರಾಜ ತನ್ನ ದಂಡನ್ನು ತಂದು ಊರ ಹೊರಗೆ ನಿಲ್ಲಿಸಿ ಗಾದಿಗನಲ್ ಪರದಾನಿ ಜತೆ ಸುದ್ದಿ ಕಳಿಸಿದ. ಮಗನ ನೀರಲ ಕಾರ್ಯದಲ್ಲಿದ್ದ ಚಿತ್ರಶೇಖರ ರಾಜ ಈ ಸುದ್ದಿ ಕೇಳಿ ಗಾಬರಿಯಾದ. ಕಪ್ಪ ಕಾಣಿಕೆಯನ್ನು ಕೊಡಲು ಒಪ್ಪಿ ಮಗನ ಕಾರ್ಯ ಮುಗಿಸಿಕೊಂಡು ಹೋಗಲು ತಿಳಿಸಿದನು. ಭದ್ರಶೇಖರ ತನ್ನ ದಂಡಿನ ಸಮೇತ ಅಲ್ಲೇ ಉಳಿದ. ಅವನ ದಂಡಿಗೆ ಊಟ ಉಪಚಾರವಾಯಿತು. ಈ ಉಪಕಾರ ತೀರಿಸುವುದಕ್ಕಾಗಿ ಭದ್ರಶೇಖರ ತನ್ನ ಪರದಾನಿಯನ್ನು ಕರೆದು ಈ ದಿನ ರಾತ್ರಿ ಈ ಪಟ್ಟಣದ 'ಗಸ್ತಿ' ತಿರುಗಬೇಕು ಎಂದನು.

ಆ ದಿನ ರಾತ್ರಿ ಗಾದಿಗನಲ್ ಪರದಾನಿ ಗಸ್ತಿ ತಿರುಗುತ್ತಾ ಅರಮನೆ ಕಡೆ ಬಂದನು. ಎಲ್ಲಾ ಕಡೆ ಕತ್ತಲು, ಎಲ್ಲೂ ಸದ್ದಿಲ್ಲ. ಇಂಥ ಅಪ ವೇಳೆಯಲ್ಲಿ ಯಾರೋ



ಬ್ರಹ್ಮನು ನೀಲಕುಮಾರನ ಹಣೆಬರಹ ಬರೆಯುತ್ತಿರುವುದು

ಮಾತಾಡುತ್ತಿರುವುದು ಕೇಳಿಸಿತು. 'ದನಿ' ಬಂದ ಕಡೆ ಹೋದ, ಅದು ರಾಣಿ ವಾಸ, ಕಿಟಕಿಯಲ್ಲಿ ಇಣಕಿದ. ಅವನಿಗೆ ಸೋಜಿಗವಾಯಿತು. ರಾಣಿ ಮಂಚದ ಮೇಲೆ ಕೂಸನ್ನು ಹಾಕಿಕೊಂಡು ಮಲಗಿದ್ದಳು. ಅವಳ ಗೌಡೇರು ಗಾಢನಿದ್ರೆಯಲ್ಲಿದ್ದರು. ಅಲ್ಲಿ ಬ್ರಹ್ಮ ಮತ್ತು ಸರಸ್ವತಿ ಆ ಕೂಸಿನ ಹಣೆಬರಹ ಬರೆಯುತ್ತಿದ್ದರು. ಸರಸ್ವತಿ ಹೇಳಿದಳು" ಈ ಕೂಸು ಹುಟ್ಟಿ ಇಂದಿಗೆ ಮೂರು ದಿನ ಬೆಳಗಾದರೆ, ನಾಕನೇ ದಿನ ವನವಾಸಕ್ಕೆ ಹೋಗಬೇಕು, ಹೊಳೆಯಲ್ಲಿ ಬೀಳಬೇಕು. ಕಲ್ಲಲ್ಲಿ ಮುಳ್ಳಲ್ಲಿ ತೆವಳುತ್ತಾ ಭದ್ರಶೇಖರ ರಾಜನ ರಾಜ್ಯ ಸೇರಬೇಕು. ಅಲ್ಲಿಯೇ ದೊಡ್ಡವನಾಗಬೇಕು, ಭದ್ರಶೇಖರನ ಮಗಳನ್ನು ಮದುವೆಯಾಗಬೇಕು, ಅಲ್ಲಿಯೇ ಗಾದಿಗನಲ್ ಪರದಾನಿಯನ್ನು ಕೋಣನ ಮೇಲೆ ಕೂಡಿಸಿ ಮೆರವಣಿಗೆ ಮಾಡಿ ಗುಡ್ಡೆ-ಕಲ್ಲಿಗೆ ನಿಂದ್ರಿಸಿ ಕಡಿಯಬೇಕು" ಎಂದು ಬರೆದು ಮಾಯವಾದರು.

ಇದನ್ನು ಕೇಳಿ ಗಾದಿಗನಲ್ ಪರದಾನಿಗೆ ಎದೆ ಧಸ್ ಎಂದಿತು. ಕೂಡಲೇ ಸಿಟ್ಟು ನೆತ್ತಿಗೇರಿತು. ಈ ಕೂಸು ನನ್ನನ್ನು ಕೊಲ್ಲುವ ಮೊದಲು ನಾನೇ ಕೊಲ್ಲಬೇಕು ಎಂದು ಅಂದುಕೊಂಡನು.

ಬೆಳಕು ಹರಿಯಿತು. ಭದ್ರಶೇಖರ ತನ್ನ ದಂಡು ಸಮೇತ ಹಿಂದಿರುಗಿದ. ಇತ್ತ ಗಾದಿಗನಲ್ ಪರದಾನಿಯ ಹೊಟ್ಟೆಯಲ್ಲಿ ತಳಮಳ. ಐದು ಗಾವುದ ದೂರ ಹೋದನಂತರ "ಪ್ರಭು ನಮ್ಮ ಲೆಕ್ಕದ ಪುಸ್ತಕ ಅಲ್ಲೇ ಬಿಟ್ಟು ಬಂದಿದ್ದೇವೆ " ಎಂದು ನೆಪ ಹೇಳಿ ಕುದುರೆ ಹತ್ತಿ ವಾಪಸ್ಸು ಬಂದ. ಕತ್ತಲಾಗುವವರೆಗೂ ಕಾದು ಕುಳಿತ. ನಡುರಾತ್ರಿಯಾಯಿತು. ರಾಣಿಯ ಕೋಣೆಯತ್ತ ಸಪ್ಪಳಿಲ್ಲದೇ ಬಂದು ಕಿಟಕಿಯಲ್ಲಿ ಇಣುಕಿದ. ವೇಷ ಬದಲಾಯಿಸಿಕೊಂಡಿದ್ದ. ಮಂಚದ ಮೇಲೆ ಕೂಸು ಮಾತ್ರ ಇತ್ತು. ರಾಣಿ ಶೌಚಕ್ಕೆ ಹೋಗಿದ್ದಳು. ಗೌಡೇರು ನಿದ್ದೆಗೆಟ್ಟು ಮಲಗಿದ್ದರು. ಪರದಾನಿ ಕೂಸನ್ನು ಎತ್ತಿಕೊಂಡು ಕುದುರೆ ಹತ್ತಿ ಕಾಡನ್ನು ಸೇರಿದ.

ಏಳುಗಾವುದ ದೂರದ ಮೇಲೆ ಇನ್ನೊಂದು ಗಾವುದ ದೂರ ದಾಟಿದರೆ ಅಲ್ಲೊಂದು ದಟ್ಟ ಅರಣ್ಯ. ಆ ಅರಣ್ಯ ದಾಟಿದರೆ ದೊಡ್ಡ ಹೊಳೆ. ಆ ಹೊಳೆ ಸಮೀಪ ಗಾದಿಗನಲ್ ಪರದಾನಿ ಬಂದ. ಹೊಳೆಯ ದಂಡೆಯಲ್ಲಿದ್ದ ಉಸುಕಿನಲ್ಲಿ ಕೂಸನ್ನು

ಹೂತುಬಿಟ್ಟ. ಬ್ರಹ್ಮನು ಬರೆದ ಹಣೆಯ ಬರಹ ತಪ್ಪುವುದಿಲ್ಲ ಅಂತಾರೆ ನೋಡಬೇಕು ಎಂದು ಹೂತ ಕೂಸನ್ನು ಹೊರಕ್ಕೆ ತೆಗೆದ. ಕಣ್ಣು ಬಾಯಲ್ಲಿ ಉಸುಕು ತುಂಬಿದ ಕೂಸು ಅಳುತ್ತಿತ್ತು. ಆ ಕೂಸಿನ ಕಾಲನ್ನು ಹಿಡಿದು ಮೇಲೆ ಎತ್ತಿ ನೆಲಕ್ಕೆ ಬಡಿದ. ಆದರೂ ಕೂಸು ಸಾಯಲಿಲ್ಲ. ಹೊಳೆಗೆ ಹಾಕಿದರೆ ಮೀನು-ಮೊಸಳೆ ತಿನ್ನುತ್ತವೆ ಎಂದು ಯೋಚಿಸಿ ಕಾಲುಗಳನ್ನು ಹಿಡಿದು ಬೀಸಿ ಹೊಳೆಯಲ್ಲಿ ಎಸೆದು ಕುದುರೆ ಏರಿ ಹೊರಟೇಬಿಟ್ಟನು.



ಪರದಾನಿ ಮಗುವನ್ನು ಹಿಂಸಿಸುತ್ತಿರುವುದು

ಆ ಕೂಸು ಸಾಯದೆ ತೆಪ್ಪದಂತೆ ತೇಲಿ ಹೋಯಿತು. ತೇಲಿ ಬರುವ ಕೂಸನ್ನು ಮೀನುಗಳೆರಡು ನೋಡಿದವು. ಹೆಣ್ಣುಮೀನು " ಕೂಸು ತೇಲಿ ಬರುತ್ತಿದೆ ನಮಗೂ ಮಕ್ಕಳಿಲ್ಲ. ತೆಗೆದುಕೊಂಡು ಹೋಗಿ ಜ್ವಾಪಾನ ಮಾಡೋಣ " ಎಂದಿತು. ಅದಕ್ಕೆ ಗಂಡು ಮೀನು "ಅಯ್ಯೋ ಹುಚ್ಚಿ ಅವನು ನರಮಾನವ ಅವನು ನಮ್ಮನ್ನು ಉಳಿಸೋದಿಲ್ಲ

ತಿಂದುಬಿಡುತ್ತಾನೆ ಬೇಡ " ಎಂದಿತು. ಹೆಣ್ಣು ಮೀನು ಹಠಮಾಡಿತು.ಕೊನೆಗೆ ಎರಡು ಮೀನುಗಳು ಆ ಕೂಸನ್ನು ಒಂದು ನಡುಗಡ್ಡೆಗೆ ತೆಗೆದುಕೊಂಡು ಹೋಗಿ ಇಟ್ಟವು. ಕೂಸಿಗೆ ಹಸಿವಾಗಿ ಅಳುತ್ತಿತ್ತು. ಅದರ ಕಷ್ಟವನ್ನು ನೋಡಲಾರದೆ ದೇವರು ಹಸಿವಿಲ್ಲದಂತೆ ಮಾಡಿದನು.

ಇತ್ತ ಮೀನುಗಳು ಈಜುತ್ತ ಹೊಳೆಯ ದಡದ ಸಮೀಪ ಬಂದಾಗ ಬೆಸ್ತರವನು ಬಲೆಬೀಸಿದನು. ಬಲೆಯಲ್ಲಿ ಎರಡೂ ಮೀನುಗಳು ಸಿಕ್ಕಿಬಿದ್ದವು. ದೊಡ್ಡಮೀನುಗಳನ್ನು ನೋಡಿ ಬೆಸ್ತರವನಿಗೆ ಆನಂದವಾಯಿತು. ಮನೆಗೆ ಬಂದು ಹೆಂಡತಿಗೆ ತೋರಿಸಿ "ನೋಡೇ ಇವತ್ತು ಎರಡು ಮೀನುಗಳು ಸಿಕ್ಕಿವೆ"ಎಂದನು. ಅವಳು ಹಿರಿಹಿರಿ ಹಿಗ್ಗಿ "ಅಬ್ಬಾ ಒಳ್ಳೆ ಅಡುಗೆ ಇವತ್ತು ನೋಡು ಹತ್ತು ಪಾಲು ಹಾಕಿ ಬಿಡು ಒಂಭತ್ತು ಪಾಲು ಮಾರಿ ಒಂದು ಪಾಲು ಅಡುಗೆ ಮಾಡೋಣ" ಎಂದು ಹೇಳಿ ಅಂಗಡಿಗೆ ಮಸಾಲೆ ಸಾಮಾನು ತರಲು ಹೋದಳು. ಬೆಸ್ತರವನು ಮೀನುಗಳನ್ನು ಬಚ್ಚಲಲ್ಲಿ ಇಟ್ಟು ಮಚ್ಚನ್ನು ಮಸೆಯಲು ಕುಳಿತನು. ಅವನ ಗುಡಿಸಲು ಸುತ್ತ ನೆರಕಿ ಕಟ್ಟಲಾಗಿತ್ತು. ಎರಡೂ ಮೀನುಗಳು ದೇವರನ್ನು ನೆನೆದವು. ಈ ಕಟುಕ ನಮ್ಮನ್ನು ಉಳಿಸುವುದಿಲ್ಲ . ಆ ಕೂಸಿನ ಗತಿಯೇನು ಎಂದು ದುಃಖಿಸುತ್ತಿದ್ದವು. ಕೂಡಲೇ ಮಾಯದ ಮಳೆ ಬಂದಿತು. ಊರಲ್ಲಿ ನೀರು ನುಗ್ಗಿ ಬೆಸ್ತರವನ ಗುಡಿಸಲು ಕೊಚ್ಚಿ ಹೋಯಿತು. ಮೀನುಗಳೆರಡೂ ನೀರಿನಲ್ಲಿ ಈಜುತ್ತ ಹೊಳೆಯನ್ನು ಸೇರಿದವು. ಹೊಳೆ ತುಂಬಿ ಕೂಸಿದ್ದ ನಡುಗಡ್ಡೆ ಮುಳುಗಿತು. ಕೂಸು ತೇಲುತ್ತಾ ತೇಲುತ್ತಾ ಇನ್ನೊಂದು ಗಡ್ಡೆಯಲ್ಲಿ ಬಿದ್ದಿತು.

## ೨

ಭದ್ರಶೇಖರ ರಾಜನ ಪಟ್ಟಣದಲ್ಲಿ ಮುತ್ತು ಶೆಟ್ಟಿಯೆಂಬ ವ್ಯಾಪಾರಿ ಇದ್ದನು. ಅವನಿಗೆ ಆರು ಜನ ಹೆಂಡತಿಯರು. ಯಾರಿಗೂ ಮಕ್ಕಳಾಗಲಿಲ್ಲ. ಅವರೆಲ್ಲ ಕೂಡಿ ಮುತ್ತು ಶೆಟ್ಟಿಗೆ "ಕುರಿಗಳನ್ನು ತನ್ನಿ. ಅವುಗಳ ಮರಿಗಳೊಡನೆ ಆಟ ಆಡಿ ಕಾಲ ಕಳೆಯುತ್ತೇವೆ" ಎಂದರು. ಮುತ್ತುಶೆಟ್ಟಿ ಒಪ್ಪಿ ಕುರಿಗಳನ್ನು ತಂದು ಅವುಗಳಿಗೆ ಬೇರೆ ಕುರಿಹಟ್ಟಿ ಮಾಡಿಸಿದ.

ಅದೇ ಊರಲ್ಲಿ ನಿಂಗವ್ವ ಎಂಬ ಮುದುಕಿ ಇದ್ದಳು. ಆಕೆಗೆ ಏಳು ಜನ ಗಂಡು ಮಕ್ಕಳು. ಗಂಡ ತೀರಿದ್ದ. ಏಳು ಮಕ್ಕಳು ದಡ್ಡರು.,ಸೋಮಾರಿಗಳು. ಹೊರಗಿನ ತಿಳುವಳಿಕೆ ಇರಲಿಲ್ಲ. ಮುತ್ತು ಶೆಟ್ಟಿ ನಿಂಗವ್ವನನ್ನು ಕರೆಯಿಸಿ "ನಿನ್ನ ಮಕ್ಕಳನ್ನು ಕುರಿಕಾಯಲು ಕಳುಹಿಸು"ಎಂದನು. ಅದಕ್ಕೆ ಆಕೆ "ಸಾವುಕಾರರೇ ಅವರು ದಡ್ಡರು, ತಿಳುವಳಿಕೆಯಿಲ್ಲ ನೀವೇ ಕಲಿಸಬೇಕು" ಎಂದಳು. ಮುತ್ತುಶೆಟ್ಟಿ ಅವರನ್ನು ಕರೆಯಿಸಿದ ಅವರೆಲ್ಲ ಬಂದು "ಸಾವುಕಾರರೇ ನಾವು ಏನು ಮಾಡಬೇಕು" ಎಂದರು. ಈ ಕುರಿಗಳನ್ನು ದಿನಾಲು ಕಾದು ಮೇಯಿಸಿಕೊಂಡು ಬರಬೇಕು. ಏನು ಸಂಬಳ ಕೊಡಬೇಕು ಕೇಳಿರಿ"ಎಂದ. ಅವರಿಗೆ ಸಂಬಳ ಅಂದರೆ ಗೊತ್ತಿಲ್ಲ. ಅವರೆಲ್ಲ "ಸಂಬಳ ತಗಂಡು ಏನು ಮಾಡಬೇಕು. ನಿಮ್ಮ ಕುರೀನ ನಾವು ಏಕೆ ಕಾಯಬೇಕು ಇಲ್ಲ ಹೋಗ್ರಿ" ಎಂದರು. "ದಡ್ಡರೆ ಸಂಬಳ ನಿಮಗೆಲ್ಲ ಊಟಕ್ಕೆ ಬೇಕು ಅದಕ್ಕೆ ಕುರಿ ಕಾಯಬೇಕು" ಎಂದರು.

ಅದರಲ್ಲಿ ಒಬ್ಬನು ಅರ್ಥಮಾಡಿಕೊಂಡು "ನಮಗೆ ಊಟ ಕೊಡುತ್ತೀರಾ, ನಮಗೇನು ಬೇಡಾರಿ ತಲೆಗೊಂದರಂತೆ ಏಳುಪಡಿ ನುಚ್ಚುಕೊಡ್ರಿ" ಎಂದ. "ಈದ ಮರಿಗಳನ್ನು ದಿನಾಲು ತಂದು ಒಪ್ಪಿಸಬೇಕು" ಎಂದು ತಿಳಿಸಿ ನುಚ್ಚುಕೊಟ್ಟು ಕಳಿಸಿದನು. ಹೀಗೆ ಅವರು ಕುರಿ ಕಾದು ಮರಿಗಳನ್ನು ದಿನಾಲು ತಂದು ಕೊಡುತ್ತಿದ್ದರು. ಮುತ್ತುಶೆಟ್ಟಿಯ ಹೆಂಡತಿಯರು "ಖುಷಿ"ಯಿಂದ ಮರಿಗಳೊಡನೆ ಆಟವಾಡುತ್ತಾ ಕಾಲ ಕಳೆಯುತ್ತಿದ್ದರು.

ಹೀಗಿರಲು ಒಂದು ದಿನ ಹೊಳೆಯ ದಂಡೆಯ ಮೇಲೆ ಕುರಿ ಮಂದೆಯನ್ನು ಮೇಯಲು ಬಿಟ್ಟು ಏಳು ಜನ ದಡ್ಡರು ಊಟ ಮಾಡುತ್ತ ಕುಳಿತಿದ್ದರು. ನಡುಗಡ್ಡೆಯಲ್ಲಿ ಕೂಸು ಅಳುವುದು ಕೇಳಿಸಿತು. ಒಂದು ಬಂಜೆ ಆಡು ಆ ದನಿ ಕೇಳಿ ಈಜುತ್ತಾ ನಡುಗಡ್ಡೆಗೆ ಹೋಗಿ ಎರಡೂ ಮಂಡಿಗಳನ್ನು ನೆಲಕ್ಕೆ ಊರಿ ಅಳುತ್ತಿದ್ದ ಕೂಸಿನ ಬಾಯಿಗೆ ಹಾಲು ಹಿಂಡಿತು. ದೇವರ ಅನುಗ್ರಹದಿಂದ ಬಂಜೆ ಆಡಿಗೆ ಹಾಲು ಮೂಡಿದ್ದವು. ಊಟ ಮಾಡಿ



ಮಗುವಿಗೆ ಹಾಲು ಕೊಡುತ್ತಿರುವ ಬಂಜೆ ಆಡು

ಎದ್ದ ಏಳು ಜನ ಕುರಿ ಮಂದೆ ನೋಡಿದರು. ಆಡು ಇಲ್ಲದ್ದು ಕಂಡು ಗಾಬರಿಯಾಗಿ ಸುತ್ತಲೂ ಹುಡುಕಿದರು. ಎಲ್ಲೂ ಕಾಣಲಿಲ್ಲ. ಚಿಕ್ಕವನು ಗಡ್ಡೆಕಡಿ ನೋಡಿ ಈಜುತ್ತಾ ಹೋಗಿ ನಡುಗಡ್ಡೆ ಮುಟ್ಟಿದನು. ಬಂಜಿ ಆಡು ಕೂಸಿಗೆ ಹಾಲು ಕೊಡುತ್ತಿದ್ದನ್ನು ನೋಡಿ ತಲೆ ಕೆರೆದುಕೊಂಡು "ಏಯ್ ನೋಡಿರೋ ಗೊಡ್ಡಿ ಆಡು ಈಯೋದಿಲ್ಲ ಅಂದ್ರೆಲ್ಲಾ ಮರಿ ಹಾಕಿದೆ" ಅಂತ ಕೂಗಿ ಕೂಸಿನ ಎರಡೂ ಕಾಲುಗಳನ್ನು ಮೇಲೆತ್ತಿ ತೋರಿಸಿದನು. ಅವರು ತರಲು ಸೂಚಿಸಿದರು.

ಅವನು ಕೂಸಿನ ಎರಡೂ ಕಾಲುಗಳನ್ನು ಹಿಡಿದು ನೀರಿನಲ್ಲಿ ಎಳೆಯುತ್ತ ಈಜುತ್ತಾ ಬರುವಾಗ ಆಡು ಹಿಂದೇನೆ ಈಜುತ್ತಾ ಅರಚುತ್ತಾ ಬಂದಿತು. ಅರಚುವ ಕೂಸನ್ನು ದಡಕ್ಕೆ ತಂದು ದುಪ್ಪನೆ ಅವರ ಮುಂದೆ ಎಸೆದನು. ಅವರು ಆ ಕೂಸನ್ನು ಮುಟ್ಟಿ ನೋಡಿ

ಚಕಿತರಾಗಿ ಕುರಿಕಾಯಲು ಹೋಗಿ ಬಿಟ್ಟರು. ರಣ ರಣ ಬಿಸಿಲು ಕೂಸಿಗೆ ನೆರಳಿಲ್ಲ. ಆಡು ಕೂಸಿಗೆ ಅಡ್ಡವಾಗಿ ನಿಂತು ನೆರಳು ಮಾಡಿತು. ಸಂಜೆ ದಡ್ಡರೆಲ್ಲ ಮನೆ ಕಡೆ ಹೊರಟರು. ಹೆಗಲ ಮೇಲೆ ಕೂಸನ್ನು ಹಾಕಿಕೊಂಡು ಹಟ್ಟಿಯಲ್ಲಿ ಒಯ್ದು ಕುರಿಮರಿಗಾಗಿ ಮಾಡಿಸಿದ ಪುಟ್ಟಿಯಲ್ಲಿ ಹಾಕಿ ಮುಚ್ಚಿಬಿಟ್ಟರು. ಕುರಿ ಹಟ್ಟಿಯಲ್ಲಿಯ ಆಡು ಆ ಕೂಸಿನ ಪುಟ್ಟಿಯ ಹತ್ತಿರವೇ ನಿಂತಿತು.

ಬೆಳಕು ಹರಿಯಿತು. ಏಳು ಜನಾನು ಸಾಹುಕಾರನ ಹತ್ತಿರ ನುಚ್ಚನ್ನು ಕೇಳಲು ಹೋದಾಗ ಆ ಕೂಸಿನ ಎರಡೂ ಕಾಲನ್ನು ಎಳೆಯುತ್ತಾ ಒಯ್ದಿದ್ದರು. ಮುತ್ತು ಶೆಟ್ಟಿ ಮತ್ತು ಅವನ ಹೆಂಡತಿಯರು ಹೊರಗೆ ಬಂದರು. "ನೋಡ್ರಿ ಸಾವುಕಾರರೇ ಗೊಡ್ಡಿ ಆಡು ಈಯೋದಿಲ್ಲ ಅಂತಿದ್ರೆಲ್ಲಾ ನೋಡಿ ನಡುಗಡ್ಡೆಯಲ್ಲಿ ಈದೈತೆ ಅವರ ಪಾಲಿನ ನುಚ್ಚೆಲ್ಲ ನನಗೆ ಕೊಡಿರಿ ನಾನು ತಂದೀನಿ" ಎಂದನು. "ಅಯ್ಯೋ ದಡ್ಡಮುಂಡೆ ಮಕ್ಕಳಿರಾ ? ಇದು ಆಡು ಈದಿರೋ ಮರಿ ಅಲ್ಲ. ಇದು ಕೂಸು ಮನುಷ್ಯ" ಎಂದು ಬೈದು ನುಚ್ಚುಕೊಟ್ಟು ಕಳಿಸಿದ.

ಇತ್ತ "ಕೂಸನ್ನು ನಾವೇ ಸಾಕೋಣ" ಎಂದು ಶೆಟ್ಟಿ ಮಾತು ಕೇಳಿ ಹೆಂಡತಿಯರೆಲ್ಲ ಹಿರಿ ಹಿರಿ ಹಿಗ್ಗಿದರು. ಕೂಸಿನ ಮೈಯನ್ನು ತೊಳೆದು ಮುಲಾಮು ಹಚ್ಚಿ ಆರೈಕೆ ಮಾಡಿದರು. ಅವರೆಲ್ಲ ಆ ಮಗುವಿನೊಡನೆ ದಿನ ದಿನ ಕಾಲ ಕಳೆದರು. ಮಗು ಸಿಕ್ಕ ಮೂರನೇ ದಿನದಲ್ಲಿ ಮುತ್ತು ಶೆಟ್ಟಿ ಮೂರು ದಿವಸದ "ವೀರಲ" ಕಾರ್ಯವನ್ನು ಅತೀ ವಿಜೃಂಭಣೆಯಿಂದ ಮಾಡಿದ. ಆ ಮಗುವಿಗೆ "ನೀಲಕುಮಾರ" ಎಂದು ಹೆಸರು ಇಟ್ಟರು.

ಹೀಗೆ ನೀಲಕುಮಾರ ದಿನದಿನಕ್ಕೂ ಅಂದಚೆಂದದಿಂದ ಬೆಳೆಯುತ್ತಾ ಎಂಟು ವರ್ಷದವನಾದ. ಮುತ್ತು ಶೆಟ್ಟಿ ಅವನನ್ನು "ರಾಜ ಶಾಲೆಗೆ" ಓದಲು ಸೇರಿಸಿದ. ಶಾಲೆಯಲ್ಲಿ ನೀಲಕುಮಾರ ದಿನದಿಂದ ದಿನಕ್ಕೆ ಅಕ್ಷರ ಕಲಿಯುತ್ತಾ ಓದುತ್ತಾ ಬರೆಯುತ್ತಾ ಬುದ್ಧಿವಂತನಾಗಿ ಎಲ್ಲರನ್ನೂ ಮೀರಿಸಿದ. ಗುರುಗಳಿಗೆ ಪಟ್ಟದ ಶಿಷ್ಯನಾದ.

ಭದ್ರಶೇಖರ ತನ್ನ ಮಗಳು ಮೈನಾವತಿಯನ್ನು ಅದೇ ಶಾಲೆಗೆ ಸೇರಿಸಿದ. ಆರು ವರುಷದ ಮೈನಾವತಿ ನೀಲಕುಮಾರನ ಗೆಳೆತನ ಮಾಡಿಕೊಂಡಳು. ಗೆಳೆತನ ಬೆಳೆದಂತೆ ಅವಳೊಂದಿಗೆ ಆಡುತ್ತಾ ಹಾಡುತ್ತಾ ಅವಳನ್ನು ಗೋಲಿ ತೆಗೆದು ಹೊಡೆಯುವಷ್ಟು ಮುಂದುವರಿದ.

ಒಂದು ದಿನ ಶಾಲಾ ಗುರುಗಳು ಕೆಲಸದ ಮೇಲೆ ಹೊರಗೆ ಹೋದಾಗ ನೀಲಕುಮಾರನಿಗೆ ತರಗತಿ ನೋಡಿಕೊಳ್ಳಲು ಹೇಳಿ ಹೋದರು. ಆತನ ಮಾತಿಗೆ ಕಲಿಯುವವರು ಯಾರು ಎದುರಾಡುತ್ತಿರಲಿಲ್ಲ. ಆದರೆ ಮೈನಾವತಿ ಮಾತ್ರ ಪಾಠ ಒಪ್ಪಿಸಲಿಲ್ಲ. ನೀಲಕುಮಾರ ಅವಳ ಕಪಾಳಕ್ಕೆ ಹೊಡೆದ. ಈ ಸುದ್ದಿ ಅವಳ ತಂದೆಗೆ ತಲುಪಿ,



ರಾಜಕುಮಾರಿಯ ಕೆನ್ನೆಗೆ ಬಾರಿಸುತ್ತಿರುವ ನೀಲಕುಮಾರ

ಗಾದಿಗನಲ್ ಪರದಾನಿಗೆ ರಾಜ ಆಜ್ಞೆ ಮಾಡಿ ಕರೆ ತರಲು ತಿಳಿಸಿದ. ಗಾದಿಗನಲ್ ಪರದಾನಿ ಬಂದು ಎಳೆದುಕೊಂಡು ಹೊರಹೋದ. ಗುರು ಏನು ಕಾದಿದೆಯೋ ಎಂದು ಮಮ್ಮಲ ಮರುಗಿದ.

೩

ನೀಲಕುಮಾರನನ್ನು ಕುದುರೆ ಮೇಲೆ ಹತ್ತಿಸಿಕೊಂಡು ಅರಮನೆಯತ್ತ ಹೊರಟ. ಗಾದಿಗನಲ್ ಪರದಾನಿ ತಿರುಗಿ ನೋಡಿದಾಗ ಎದೆ 'ಧಸ್'ಎಂದಿತು. ನೀಲನ ಹಣೆಯ ಮೇಲಿನ ಹಳೆ ಗುರುತು ಕಂಡು ಬ್ರಹ್ಮ ಬರೆದ ಹಣೆಬರಹ ತಪ್ಪುವದಿಲ್ಲ ಎನ್ನುತ್ತಾರೆ. ಅವನೇ ಇವನು ಇನ್ನೂ ನನ್ನ ಉಳಿಸಲಾರ. ಈಗಲೇ ಕೊಲ್ಲಬೇಕೆಂದು ಕುದುರೆಯನ್ನು ಅಡವಿಯ ಕಡೆ ತಿರುಗಿಸಿದ. "ಯಾಕಪ್ಪಾ ಈ ಕಡೆ ತಿರುಗಿಸಿದೆ ಅರಮನೆ ಇರೋದು ಈ ಕಡೆ," ಎಂದಾಗ ಗಹಗಹಿಸಿ ನಕ್ಕು ಹಲ್ಲು ಕಡಿದ ಪರದಾನಿ " ಇನ್ಯಾವ ಅರಮನೆಯೋ ಮುಠ್ಠಾಳ ಅಲ್ಲಿದೆ ಬಾ ತೋರಿಸುತ್ತೇನೆ ನಿನ್ನ ಅರಮನೆ " ಎಂದು ಕಪಾಳಕ್ಕೆ ಹೊಡೆದಾಗ ನೀಲ ಅವನ ಏಟಿಗೆ ತತ್ತರಿಸಿದ. ಮತ್ತೆ ಪೆಟ್ಟಾಗಿ ರಕ್ತ ಚಿಮ್ಮಿತು. ಅಯ್ಯೋ ಎಂದು ಚೀರಿದ ನೀಲನಿಗೆ ಎಚ್ಚರ ತಪ್ಪಿತು. ಮತ್ತೆ ಮತ್ತೆ ಕಲ್ಲಿನಿಂದ ಜಜ್ಜಿದ. ಕೈಕಾಲುಗಳನ್ನು ಹಗ್ಗದಿಂದ ಬಿಗಿದು ಕುದುರೆ ಕಾಲಿಗೆ ಕಟ್ಟಿ ಓಡಿಸಿದ. ಕಲ್ಲುಮುಳ್ಳುಗಳು ಮೈಯಿಗೆ ತಾಗಿ ಚರ್ಮ ಕಿತ್ತು ರಕ್ತ ಜಿನುಗುತ್ತಿತ್ತು. ದೊಡ್ಡ ಮರದ ಹತ್ತಿರ ಎಳೆದು ತಂದು ಕಾಲು ಮೇಲೆ ಮಾಡಿ ತಲೆ ಕೆಳಗೆ ಮಾಡಿ ಕಟ್ಟಿ ಕುದುರೆ ಹತ್ತಿ ಹೊರಟೇ ಬಿಟ್ಟ. ತಲೆ ಕೆಳಗಾದ ನೀಲನ ಮೂಗಿನಿಂದ ರಕ್ತ ತಟ ತಟ ಇಳಿಯುತ್ತಿತ್ತು.

ಕತ್ತಲಾಗಿತ್ತು. ಕಾಡಿನಲ್ಲಿ ನರಪಿಳ್ಳೆಯ ಸುಳಿವೂ ಇಲ್ಲ. ಅಲ್ಲಲ್ಲಿ ನರಿಯ ಕೂಗು. ವ್ಯಾಪಾರ ಮುಗಿಸಿಕೊಂಡು ಅದೇ ದಾರಿಯಲ್ಲಿ ಬಂಡಿ ಮೇಲೆ ಮುತ್ತು ಶೆಟ್ಟಿ ಬಂದ. ಕತ್ತಲಾದುದರಿಂದ ಅಲ್ಲಿಯೇ ಮಲಗಿ ಹೋದರಾಯಿತೆಂದು ದೊಡ್ಡ ಮರದ ಕೆಳಗೆ ಬಂಡಿಗಳನ್ನು ತರುಬಿ ನಾಲ್ಕು ಬಂಡಿಯವರು ದೊಂಬಿ ಹಚ್ಚಿ ಮಲಗಿದರು. ಮುತ್ತು ಶೆಟ್ಟಿಯ ಎದೆಯ ಮೇಲೆ ತಟ ತಟ ಹನಿ ಬಿದ್ದಕಾರಣ ಎಚ್ಚರವಾಗಿ ಕಣ್ಣು ಬಿಟ್ಟು ಮೇಲೆ ನೋಡಿದ. ಮರದ ಕೊಂಬೆಗೆ ಯಾರನ್ನೋ ಕಟ್ಟಿದನ್ನು ನೋಡಿ ಧಡ ಧಡನೆ ಎದ್ದು ದೊಂಬಿಯನ್ನು ತಂದು ಬೆಳಕು ಹಿಡಿದು ಚೀರಿದ. ಮುತ್ತು ಶೆಟ್ಟಿ ಮಗನ ಮುಖ ನೋಡಿ ಗಾಬರಿಯಾದ. ತಕ್ಷಣ ಹಗ್ಗಬಿಚ್ಚಿ ಕೆಳಗೆ ಇಳಿಸಿ ಗಾಯದ ರಕ್ತ ಕಲೆಯನ್ನು ಒರೆಸಿ ಬಂಡಿಯಲ್ಲಿ ಹಾಕಿಕೊಂಡು ಮನೆಗೆ ಬಂದು ವೈದ್ಯರನ್ನು ಕರೆದು ಉಪಚರಿಸಿದನು.

ಅಂದಿನಿಂದ ನೀಲನಿಗೆ ಮನೆಯಲ್ಲಿಯೇ ಕಲಿಸುವ ಕಲಿಕಾಕೇಂದ್ರ ತೆರೆದು ಕಲಿಸುವ ವ್ಯವಸ್ಥೆ ಮಾಡಿದ.

ಪ್ರತಿ ಸಲವೂ ಬಂದಂತೆ ಆ ವರ್ಷವೂ ಜಾತ್ರೆ ಬಂದಿತು. ಜಾತ್ರೆಯನ್ನು ನೋಡಲು ಗೆಳೆಯರ ಜೊತೆ ನೀಲಕುಮಾರ ಹೋದನು. ಜಾತ್ರೆಯಲ್ಲಿ ಇದ್ದಕ್ಕಿದ್ದಂತೆ ಗಲಾಟೆ ಶುರುವಾಯಿತು. ಅಲ್ಲಿಗೆ ಒಂದು ದೊಡ್ಡ ರಾಕ್ಷಸ ಆರ್ಭಟಿಸುತ್ತಾ ಬಂದಿತು. ಭದ್ರಶೇಖರನ ರಾಜ್ಯದಲ್ಲಿ ಅದರ ಹಾವಳಿ ಹೆಚ್ಚಾಗಿ ಮನುಷ್ಯರು ದನಕರುಗಳು ಉಳಿಯದಂತಾಗಲು ರಾಜನು ಅದರೊಂದಿಗೆ ಒಪ್ಪಂದ ಮಾಡಿಕೊಂಡು ದಿನ ಒಬ್ಬರನ್ನು ಕೊಡುವುದಾಗಿ ಕರಾರಾಗಿತ್ತು. ಅದರಂತೆ ಆ ರಾಕ್ಷಸ ಆ ದಿನ ಜಾತ್ರೆಯಲ್ಲಿ ನುಗ್ಗಿತ್ತು. ಜನ ದಿಕ್ಕಾಪಾಲಾಗಿ ಓಡಿದರು. ಕೆಲವರು ಗಾಬರಿಯಾಗಿ ದೂರ ನಿಂತು ನೋಡುತ್ತಿದ್ದರು. ಕೆಲವರು ಬಾಗಿಲು ಕಿಟಕಿ ಹಾಕಿ ಸಂದಿಯಿಂದ ಇಣುಕಿದರು. ನೀಲಕುಮಾರ ಅಂಜದೆ ಅದರ ಮುಂದೆ ನಿಂತನು.

ಗಾದಿಗನಲ್ ಫರದಾನಿ ಈ ಸಲ ಈ ರಾಕ್ಷಸನಿಗೆ ಯಾರನ್ನು ಕೊಡಬೇಕೆಂದು ಸುತ್ತಲೂ ನೋಡುವಾಗ ನೀಲಕುಮಾರ ಕಣ್ಣಿಗೆ ಬಿದ್ದ. ಜೀವ ತಣ್ಣಗಾದಂತಾಗಿ ಇವನನ್ನು ಬಿಡಬಾರದೆಂದು ಕಣ್ಣುಮುಚ್ಚಿ ಬಾಯಿ ತೆಗೆದುಕೊಂಡು ನಿಂತಿದ್ದ ರಾಕ್ಷಸನ ಬಾಯಿಗೆ ನೂಕಿ ಬಿಟ್ಟ. ಕಣ್ಣು ಮುಚ್ಚಿಕೊಂಡಿದ್ದ ರಾಕ್ಷಸ ಆಹಾರ ದೊರಕಿತೆಂದು ಬಾಯಿ ಮುಚ್ಚಿಕೊಂಡು ಜಿಗಿಯಿತು. ದೊಡ್ಡ ಕಾಡನ್ನು ಹೊಕ್ಕು ತಾನು ವಾಸವಾಗಿದ್ದ ಗವಿಯೊಳಗೆ ಬಂದಿತು. ಸ್ವಲ್ಪ ಸಮಯದ ನಂತರ ಹೊಟ್ಟೆಯಲ್ಲಿ ಏನೋ ಗುಳು ಗುಳು ಓಡಾಡಿದಂತಾಗಿ ಹೊಟ್ಟೆಯನ್ನೆಲ್ಲಾ ಹಿಚುಕಿಕೊಂಡಿತು. ಕೊನೆಗೆ ತಾಳಲಾರದೆ ಬೆರಳನ್ನು ಸಿಕ್ಕಿಸಿಕೊಂಡು ವಾಂತಿ ಮಾಡಿಕೊಂಡಿತು. ಹೊಟ್ಟೆಯೊಳಗಿದ್ದ ನೀಲಕುಮಾರ ಹೊರಗೆ ಬಿದ್ದ. ಅವನು ಇನ್ನೂ ಬದುಕಿದ್ದ. ರಾಕ್ಷಸನಿಗೆ ಸುಂದರವಾಗಿ ಕಂಡ. "ನೀನ್ಯಾರಪ್ಪ ನಿನ್ನ ನನಗೆ ಯಾರು ಕೊಟ್ಟಿದ್ದು ನಿನ್ನ ಕೊಡುವ ಸಮಯದಲ್ಲಿ ನಾನು ಕಣ್ಣುಮುಚ್ಚಿ ಬಾಯಿಯೊಂದೇ ತೆರೆದಿದ್ದೆ. ಎಂಥ ಕೆಟ್ಟವರಪ್ಪಾ.ನೀನು ಯಾರು ಹೇಳಪ್ಪ" ಎಂದ. "ನನಗೆ ಗೊತ್ತಿಲ್ಲ" ಎಂದ ನೀಲಕುಮಾರ. ನೀನು ಚಿಂತಿಸಬೇಡ. ನೀನು ನನ್ನ ಸ್ವಂತ ಮಗ ಅಂತ ತಿಳಿದುಕೊ. ನಿನಗೆ ಏನು ಬೇಕೊ ಅದನ್ನೆಲ್ಲ ತಿನ್ನು ಉಂಡು ಸುಖವಾಗಿರು. ನೋಡು ಅಲ್ಲಿ ಬೆಳ್ಳಿ ಬಂಗಾರ ವಸ್ತ್ರ ಒಡವೆ ಎಲ್ಲಾ ಆದಾವೆ

ಅವನ್ನೆಲ್ಲಾ ಉಟ್ಟುಕೋ. ಆದರೆ ಮಗಾ ನಾನು ಹೊರಗಡೆ ಹೋಗಿ ಬರುವಾಗ ಮಾತ್ರ ನನ್ನ ಕಣ್ಣಿಗೆ ಕಾಣಿಸಬೇಡ "ಎಂದು ಹೇಳಿ ಹೊರಗೆ ಹೋಯಿತು.

೪

ಅಂದಿನಿಂದ ನೀಲಕುಮಾರ ರಾಕ್ಷಸನ ಜೀವದ ನೆರಳಿನಲ್ಲಿ ಬೆಳೆದು ದೊಡ್ಡವನಾದ. ಒಂದು ದಿನ ರಾಕ್ಷಸ ಹೊರಗೆ ಹೋದಾಗ ಬೀಗದ ಗೊಂಚಲನ್ನು ಅಲ್ಲಿಯೇ ಬಿಟ್ಟಿತ್ತು. ನೀಲಕುಮಾರನಿಗೆ ಕುತೂಹಲ ಕೆರಳಿ ಗವಿಯ ದೊಡ್ಡ ಬಾಗಿಲನ್ನು ತೆರೆದನು. ಅಲ್ಲಿ ಇನ್ನೊಂದು ಬಾಗಿಲು. ಅದನ್ನು ತೆಗೆದನು. ಆ ಕೋಣೆಯೊಳಗೆ ಬಂಗಾರ, ವಜ್ರ ಜಗಜಗಿಸಿದವು. ಇನ್ನೊಂದು ಕೋಣೆ ತೆಗೆದ. ಕಾರಂಜಿಯಿಂದ ನೀರು ಪುಟಿದು ಬಣ್ಣ ಬಣ್ಣ ಕಾಣಿಸಿತು. ಮೂರನೆ ಬಾಗಿಲು ತೆರೆದ. ಅಲ್ಲಿ ಶಿವನಮೂರ್ತಿ! ಚಕಿತಗೊಂಡ. ಭಕ್ತಿಯಿಂದ ಕೈ ಮುಗಿದು ಮುಂದೆ ಸಾಗಿ ಎಲ್ಲಾ ಕೋಣೆಗಳನ್ನು ತೆರೆದ. ಕೊನೆಗೆ ಏಳನೆ ಬಾಗಿಲನ್ನು ತೆರೆದ. ಕಣ್ಣು ಕುಕ್ಕುವಂಥ ಬೆಳಕು. ಮೂಲೆಯಲ್ಲಿ ಒಂದು ಬಾವಿ. ಬಾವಿಯ ಪಕ್ಕದಲ್ಲಿ ಕುದುರೆ ಕಟ್ಟಲಾಗಿತ್ತು. ಸಮೀಪ ಬಂದ ಅದು ಬೆಳ್ಳಿಯ ಕುದುರೆ ಬೆಳ್ಳಿಯ ಬಾವಿಯಾಗಿತ್ತು.

ಬಾವಿ ಇಣುಕಿದ. ಬಾವಿ ತುಂಬಾ ನೀರು. ನೀರಿನಲ್ಲಿ ತನ್ನ ಬೆರಳ ತುದಿಯನ್ನು ಅದ್ದಿ ತೆಗೆದ. ಬೆರಳು ಬಂಗಾರದ ಬಣ್ಣವಾಯಿತು. ಆತ ಬಾವಿಯಲ್ಲಿ ಜಿಗಿದು ಎದ್ದ ಪೂರ್ತಿ ಬಂಗಾರದ ಮನುಷ್ಯನಾದ. ಇದ್ದಕ್ಕಿದ್ದಂತೆ ಯಾರೋ ಪಕಪಕನೆ ನಕ್ಕಂತಾಯಿತು. ಸುತ್ತಲೂ ನೋಡಿದ. ಬೇರೆ ಯಾರು ಅಲ್ಲ ಕುದುರೆ. ಮತ್ತೆ ಪಕಪಕನೆ ನೆಗಾಡಿ "ಯಾರಪ್ಪಾ ನೀನು ಆ ರಾಕ್ಷಸ ಬಂದರೆ ನಿನ್ನ ಪ್ರಾಣ ಉಳಿಸೋದಿಲ್ಲ. ಈಗಲೇ ತಪ್ಪಿಸಿಕೊಂಡು ಹೋಗು" ಎಂದಿತು. ಕುದುರೆಯೂ ಸಹ ಇವನು ನನಗೆ ಸರಿಯಾದ ಸವಾರ ಅಂದುಕೊಂಡಿತು. "ನನ್ನ ಕಾಲು ಬಿಚ್ಚಿಬಿಡು ನಂತರ ಹತ್ತಿಬಿಡು" ನೀಲಕುಮಾರ ಹಾಗೆ ಮಾಡಿದ. ಗವಿ ದಾಟಿ ಗಾವುದ ದೂರ ಸಾಗಿದ್ದರು.



ನೀಲಕುಮಾರನನ್ನು ಬೆನ್ನಟ್ಟಿರುವ ರಕ್ಕಸ

ಇತ್ತ ರಾಕ್ಷಸ ಅರ್ಧದಾರಿಗೆ ಹೋಗಿ ಬೀಗದ ಗೊಂಚಲನ್ನು ಜ್ಞಾಪಿಸಿಕೊಂಡಿತು. ತಕ್ಷಣ ಹಿಂದಿರುಗಿ ಅಡಬಡಿಸುತ್ತ ಹಸಗೋಲ ಹಸಿನಾತ ಹಸಿಗೋಲ ಹಸಿನಾತ ಅನಕೊಂತ ಗವಿಯ ಹತ್ತಿರ ಬಂದಿತು. ಬಾಗಿಲೆಲ್ಲಾ ತೆರೆದಿದ್ದವು. ಬಾವಿ ಸಮೀಪ ಬಂದಿತು. ಕುದುರೆಯೂ ಇಲ್ಲ ನೀಲಕುಮಾರ ಇಲ್ಲ. ರಾಕ್ಷಸ ಆರ್ಭಟಿಸುತ್ತಾ ಅವರ ಬೆನ್ನು ಹತ್ತಿತು.

ಆಗ ಕುದುರೆಯು ಇಳಿದು ಎರಡು ಅಳ್ಳನ್ನು ಆರಿಸಿಕೋ ಎಂದಿತು. ನೀಲಕುಮಾರ ಅಳ್ಳನ್ನು ಆರಿಸಿಕೊಂಡನು. ರಾಕ್ಷಸ ಹಿಡಿಯುವಷ್ಟರಲ್ಲಿಯೇ ತಪ್ಪಿಸಿಕೊಂಡರು. ಬೇಗನೆ ಒಂದು ಅಳ್ಳು ಒಗೆ ಎಂದಿತು. ಅಳ್ಳು ಒಗೆದಾಕ್ಷಣ ರಾಕ್ಷಸ ಬರುವ ದಾರಿಗೆ ನೆಗ್ಗಿಲು ಮುಳ್ಳುಗಳ ರಾಶಿ ಬಿದ್ದಿತು. ರಾಕ್ಷಸ ಆ ರಾಶಿಯನ್ನು ಒಂದೇ ಉಸಿರಿಗೆ ಊದಿತ್ತು. ಎರಡನೇ ಅಳ್ಳನ್ನು ಎಸೆದನು. ದೊಡ್ಡ ದೊಡ್ಡ ಬೆಟ್ಟಗಳು ಪರ್ವತಗಳು ತಲೆ ಎತ್ತಿದವು. ಒಂದೇ ಹೆಜ್ಜೆಯಿಂದ ರಾಕ್ಷಸ ದಾಟಿತು. ಮೂರನೇ ಅಳ್ಳನ್ನು ಎಸೆದನು. ದಾರಿಗೆ ಅಡ್ಡವಾಗಿ ತೆಳ್ಳಗೆ ನೀರು ಹರಡಿತು. ರಾಕ್ಷಸ ಕಾಲು ಇಟ್ಟಾಗ ನಡುವಿನವರೆಗೂ ಸಿಕ್ಕಿಕೊಂಡಿತು. ಇನ್ನೊಂದು ಕಾಲನ್ನು ಇಟ್ಟಾಗ ಎರಡೂ ಕಾಲುಗಳು ಹುದುಲಲ್ಲಿ ಸಿಕ್ಕಿಹಾಕಿಕೊಂಡವು. ಕಾಲುಗಳನ್ನು ಕೀಳಲು ಪ್ರಯತ್ನಿಸಿದರೂ ರಾಕ್ಷಸನಿಗೆ ಸಾಧ್ಯವಾಗದೇ ಹೋಯಿತು. ಪೂರ್ತಿ ಮುಳುಗಲಿಕ್ಕೆ ಬಂದಿತು. ಕೂಗಿತು ಕಿರುಚಾಡಿತು. ಘೀಳಿಟ್ಟಿತು. ಕೊನೆಗೆ ಹುದುಲಲ್ಲಿ ಮುಳುಗಿ ಸತ್ತೇ ಹೋಯಿತು.

೫

ನೀಲಕುಮಾರ ಭದ್ರಶೇಖರ ರಾಜನ ಪಟ್ಟಣಕ್ಕೆ ಬಂದನು. ಒಳಗೆ ಹೋಗದೆ ಊರ ಹೊರಗೆ ಒಂದು ದೇವಾಲಯದಲ್ಲಿ ಇಳಿದುಕೊಂಡನು. ನೀಲಕುಮಾರನಿಗೆ ಹಸಿವಾಯಿತು. ಆಗ ಕುದುರೆ "ಕುಮಾರ ನನ್ನ ಎಡ ಕಿವಿಯಲ್ಲಿ ಪಾತ್ರೆಗಳಿವೆ ತೆಗೆದುಕೋ ನಿನಗೆ ಯಾವ ಊಟ ಬೇಕು ಕೇಳಿಕೋ ಸಿದ್ಧವಾಗುತ್ತದೆ" ಎಂದಿತು. ನೀಲಕುಮಾರ ಹಾಗೆ ಮಾಡಿದ.

ಇಷ್ಟವಾದ ಊಟ ತಯಾರಾಯಿತು. ಕತ್ತಲಾಯಿತು. ಊಟ ಮಾಡಿ ಮಲಗಿದ. ಪಕ್ಕದಲ್ಲಿಯೇ ಕುದುರೆ ಮಲಗಿತು.

ಬೆಳಗಾಯಿತು. ನೀಲಕುಮಾರನಿಗೆ ಪಟ್ಟಣ ನೋಡುವ ಆಸೆ ಆಯಿತು. ಹೇಗೆ ಹೋಗುವದೆಂದು ಯೋಚಿಸಿದಾಗ ಕುದುರೆ ಕುಮಾರ ನನ್ನ ಬಲ ಕಿವಿಯಲ್ಲಿ ಎರಡು ಸರಗಳಿವೆ. ನಿನ್ನ ಕೊರಳಲ್ಲಿ ಒಂದು ನನ್ನ ಕೊರಳಲ್ಲಿ ಒಂದು ಹಾಕು ಎಂದಿತು. ಹಾಗೇ ಮಾಡಿದನು. ಬಂಗಾರದ ಮನುಷ್ಯ ಹುಣ್ಣಿನ ಮನುಷ್ಯನಾದ. ಅವನಿಗೆ ಸೋಜಿಗವೆನಿಸಿತು. ಕುದುರೆಯು ಬೆಳ್ಳಿಯ ರೂಪದ ಬದಲು ಬಡಕಲು ರೂಪ ಕುಂಟಗಾಲು ಕುದುರೆಯಾಗಿ ಬದಲಾಯಿತು. ಹೀಗೆ ನೀಲಕುಮಾರ ಕುಂಟಗಾಲು ಕುದುರೆ ಏರಿ ಪಟ್ಟಣಕ್ಕೆ ಬಂದನು.

ಹೀಗೆ ಸುತ್ತುತ್ತಾ ಬೀದಿಯಲ್ಲಿ ಬರುವಾಗ ಕುದುರೆಯು ಕುಂಬಾರನ ಮನೆ ಮುಂದೆ ನಿಂತಿತು. ಬೀದಿಯಲ್ಲಿಯ ಜನ ಹುಣ್ಣಿನ ಮನುಷ್ಯನ ಮೈಯ ಕೆಟ್ಟವಾಸನೆ ತಡೆಯದೆ ಮೂಗು ಮುಚ್ಚಿ ದೂರ ಸರಿದರು. ಕುಂಬಾರ ಮೂಗು ಮುಚ್ಚಿಕೊಂಡು 'ಏನಲೇ ಏನು ಬೇಕು ನಿನಗೆ' ಎಂದ. ನನಗೆ ಈ ಕೊಡ ಬೇಕು ಕೊಡು ಸ್ವಾಮಿ" ಎಂದ. 'ಲೇ ಅದನ್ನು ಇನ್ನೂ ಸುಟ್ಟಿಲ್ಲ. ದೂರ ಸರಿ ಅದನ್ನು ಮುಟ್ಟಿದರೆ ನಿನ್ನಗತಿ ನೆಟ್ಟಗಾಗಕ್ಕಿಲ್ಲ'ಎಂದು ಗದರಿಸಿದ. 'ಇಲ್ಲ ನನಗೆ ಅದೇ ಕೊಡ ಬೇಕು' ಎಂದ.'ನಿನಗೆ ಯಾವ ಕೊಡ ಬೇಕು ಹೇಳಲೆ ನಾಳೆ ಸುಟ್ಟು ಇಡುತ್ತೀನಿ ಬಂದು ತೆಗೆದುಕೊಂಡು ಹೋಗು.' ಎಂದನು. ಅವನು ತನ್ನ ತಲೆಯ ಕೂದಲು ಕಿತ್ತು ಕೊಡಕ್ಕೆ ಕಟ್ಟಿ ಹೊರಟ. ಊರ ಹೊರಗೆ ಬಂದು ಪುನಃ ಮೊದಲಿನ ರೂಪ ತಾಳಿದ.

ಕುಂಬಾರನು ಎಲ್ಲಾ ಕೊಡಗಳನ್ನು ಸುಟ್ಟನು. ನೀಲಕುಮಾರ ಕಟ್ಟಿದ ಕೂದಲಿನ ಕೊಡ ಸುಡುವಾಗ ಬಂಗಾರದ ಕೊಡವಾಯಿತು. ಕುಂಬಾರನಿಗೆ ಆನಂದವಾಗಿ ಅದನ್ನು ಒಳಗಿಟ್ಟು ಬೇರೆ ಕೊಡ ಸುಟ್ಟು ಹೊರಗಿಟ್ಟನು. ನೀಲಕುಮಾರ ಮೂರನೆ ದಿನ ಕುಂಬಾರನ ಮನೆಗೆ ಬಂದಾಗ ಬೇರೆ ಕೊಡ ತೋರಿಸಿದಾಗ ಸಿಟ್ಟಿಗೆ ಬಂದ. ಕುಂಬಾರ ಒಳಗೆ ಹೋಗಿ ಬಂಗಾರದ ಕೊಡ ತಂದ. ಆಗ ನೀಲಕುಮಾರ ಈ ಕೊಡದ ತುಂಬಾ ಯಾರು ದುಡ್ಡು ಕೊಡುತ್ತಾರೋ ಅವರಿಗೆ ಕೊಟ್ಟು ಬಿಡು. ಬಂದ ದುಡ್ಡಿನಲ್ಲಿ ಸಮ ಸಮ ಎಂದ.



**ಕುಂಬಾರ, ಬಂಗಾರದ ಕೊಡ ಮತ್ತು ನೀಲಕುಮಾರ**

ಭದ್ರಶೇಖರ ರಾಜನ ಮಗಳು ಮೈನಾವತಿ ದೊಡ್ಡವಳಾಗಿದ್ದಳು. ತನ್ನ ಗೌಡೇರ ಜತೆ ದೇವರಿಗೆಂದು ಅದೇ ಬೀದಿಯಲ್ಲಿ ಬಂದಳು. ಕುಂಬಾರನ ಮನೆ ಮುಂದೆ ಇಟ್ಟಿದ್ದ ಬಂಗಾರ ಕೊಡ ನೋಡಿ ಅದು ಎಷ್ಟು ದುಡ್ಡಾದರೂ ಸರಿ ತೆಗೆದುಕೊಂಡು ಬನ್ನಿ ಎಂದಳು. ಅವರು ಅದನ್ನು ಕೊಂಡುತಂದರು. ಮೈನಾವತಿ ಆ ಕೊಡ ನೋಡಿ ಹಿರಿ ಹಿರಿ ಹಿಗ್ಗಿದಳು. ಕೊಡವನ್ನು ಅರಮನೆಗೆ ತಂದು ಅದರಲ್ಲಿ ನೀರು ತರಿಸಿ ಕುಡಿದಳು. ಕುಡಿದ ನೀರೇ ಗರ್ಭವಾಗಿ ನಿಂತಿತು. ಆಕೆಗೆ ಚಿಂತೆಯಾಯಿತು.

ಯಾರಿಗೂ ಈ ಸುದ್ದಿ ಹೇಳಬಾರದೆಂದು ಗೌಡೇರಿಗೆ ತಿಳಿಸಿದಳು. ಈ ಸುದ್ದಿ ಯಾರಿಗೂ ಗೊತ್ತಾಗಲಿಲ್ಲ. ಆದರೆ ಮೈನಾವತಿ ಗಂಡು ಮಗುವನ್ನು ಹಡೆದಳು. ಗೌಡೇರು ಆ ಕೂಸಿನ ಕುತ್ತಿಗೆಯನ್ನು ಹಿಸುಕಲು ಮುಂದಾದರು. ಮೈನಾವತಿ ತಡೆದಳು. ಮೂರು ವರ್ಷಗಳು ಉರುಳಿದವು.

ಕೊನೆಗೆ ರಾಜನಿಗೆ ಈ ಸುದ್ದಿ ಹೇಗೋ ತಿಳಿಯಿತು. ರಾಜನಿಗೆ ವ್ಯಸನವಾಯಿತು. ಗಾದಿಗನಲ್ ಪರದಾನಿಯನ್ನು ಕರೆದು ಸಮಾಲೋಚಿಸಿದ. ಅವನಿಗೆ ಅವಳು ಒಬ್ಬಳೇ ಮಗಳು. ಸುತ್ತಲೂ ಡಂಗುರ ಸಾರಿಸಿ ಎಲ್ಲಾ ರಾಜಕುಮಾರರಿಗೆ ಬರಲು ತಿಳಿಸಿದ. ಎಲ್ಲರಿಗೂ ಊಟದ ಏರ್ಪಾಟು ಮಾಡಿದ. ಯಾರ ಜೊತೆ ಆ ಹುಡುಗ ಹೋಗಿ ಊಟ ಮಾಡುತ್ತಾನೋ ಅವನೇ ಅವನ ತಂದೆ ಎಂದು ಗುರ್ತಿಸಬೇಕೆಂದರು.

ಮೂಲೆ ಮೂಲೆಯಿಂದ ಎಲ್ಲಾ ರಾಜಕುಮಾರರು ಬಂದು ಸೇರಿದರು. ಈ ಸುದ್ದಿ ನೀಲಕುಮಾರನಿಗೂ ಗೊತ್ತಾಯಿತು. ಹುಣ್ಣಿನ ಮನುಷ್ಯನಾಗಿ ಬಂದನು. ಅವನನ್ನು ಯಾರೂ ಒಳಗೆ ಬಿಡಲಿಲ್ಲ. ಆದರೂ ಅವನು ಬಂದು ರಾಜಕುಮಾರರು ಕುಳಿತ ಸಾಲಿನಲ್ಲಿ ಕೊನೆಗೆ ಕುಳಿತ. ಭದ್ರಶೇಖರ ರಾಜ ಆಗ ತಿಳಿಸಿದ "ಈ ಹುಡುಗ ಯಾರ ಜೊತೆ ಕುಳಿತು ಊಟ ಮಾಡುತ್ತಾನೋ ಅವನೇ ಇವನ ತಂದೆ, ಅವನಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುವೆ " ಎಂದ. ರುಚಿ ರುಚಿ ಊಟ ಬಡಿಸಿದರು. ಈ ಹುಡುಗ ಕೈಯಲ್ಲಿ ಉಂಡಿ ಹಿಡಿದು ಹುಣ್ಣಿನ ಮನುಷ್ಯನ ತಟ್ಟೆಯ ಮುಂದೆ ಕುಳಿತಿತು. ಎಲ್ಲರಿಗೂ ಆಶ್ಚರ್ಯವಾಯಿತು.



ರಾಜಕುಮಾರಿಯ ಮಗು ಹುಣ್ಣಿನ ಮನುಷ್ಯನ ತಟ್ಟೆಯಲ್ಲಿ ಊಟಮಾಡುತ್ತಿರುವುದು

ರಾಜ ದಂಗಾದ. ನನ್ನ ಮಗಳನ್ನು ಈ ಹುಣ್ಣಿನ ಮನುಷ್ಯನ ಜೊತೆ ಹೇಗೆ ಮದುವೆ ಮಾಡಬೇಕು ಎಂದು ಚಿಂತಿಸಿದ. ಮಾತು ಕೊಟ್ಟಂತೆ ಮದುವೆ ಮಾಡಿದನು. ಊರ ಹೊರಗೆ ಅವರಿಬ್ಬರಿಗೂ ಮನೆ ಕಟ್ಟಿಸಿದನು. ಅವರು ಅಲ್ಲೇ ವಾಸಿಸಿದರು. ಮೈನಾವತಿ ಸೊರಗಿದಳು. ನೀಲಕುಮಾರನ ಮೈಯನ್ನು ಮುಟ್ಟುವ ಹಾಗಿಲ್ಲ, ದುರ್ನಾತ ಇನ್ನು ಆತನ ಹತ್ತಿರ ಕೂಡುವುದಾದರೂ ಹೇಗೆ ? ಮಲಗುವುದಾದರೂ ಹೇಗೆ ? ಅವಳು ಆತನ ಮೈಯನ್ನು ಮುಟ್ಟಲಿಕ್ಕೆ ಹೋಗಲಿಲ್ಲ. ಪಕ್ಕಕ್ಕೂ ಕೂಡಲಿಲ್ಲ. ದಿನಾಲೂ ಮಗುವಿನೊಂದಿಗೆ ಬೇಸರ ಕಳೆಯತೊಡಗಿದಳು.

ಒಂದು ದಿನ ನೀಲಕುಮಾರ ಮೈನಾವತಿಯ ಗುಣವನ್ನು ಪರೀಕ್ಷಿಸಲು ಕುಂಟಗಾಲು ಕುದುರೆ ಹತ್ತಿದನು. ಸ್ವಲ್ಪ ದೂರ ಹೋಗಿ ಬಂಗಾರದ ಮನುಷ್ಯನಾದನು. ಬೆಳ್ಳಿ ಕುದುರೆ ಹತ್ತಿ ಅಂಗಳದಲ್ಲಿ ಬಂದನು. ಮೈನಾವತಿ ಈ ಮನುಷ್ಯನನ್ನು ನೋಡಿದಳು. ಅವನ ರೂಪಕ್ಕೆ ಮಾರುಹೋದಳು. ಈತನನ್ನು ಮದುವೆಯಾಗಿದ್ದರೆ ಎಷ್ಟು ಚೆನ್ನಾಗಿತ್ತು ಅಂದುಕೊಂಡಳು. ನಾನು ಕೆಟ್ಟ ಯೋಚನೆ ಮಾಡುತ್ತಿದ್ದೇನೆ ಅಂದುಕೊಂಡಳು. ಪತಿಯು ಹೇಗೆ ಇರಲಿ, ಆತನೊಂದಿಗೆ ಇರುವುದು ನನ್ನ ಧರ್ಮ ಎಂದುಕೊಂಡು ಒಳಹೋದಳು. ಬಂಗಾರದ ಮನುಷ್ಯನ ರೂಪದಲ್ಲಿರುವ ನೀಲಕುಮಾರ ಹಿಂದೆಯೇ ಬಂದ. ಆಗ ಮೈನಾವತಿ ನೀವು ಯಾರು? ಇಲ್ಲಿಗೇಕೇ ಬಂದಿರಿ? ಎಂದಳು. "ನಾನು ನಿನ್ನನ್ನು ಪ್ರೀತಿಸಲು ಬಂದಿದ್ದೇನೆ, ನಿನ್ನ ರೂಪಕ್ಕೆ ಮರುಳಾಗಿದ್ದೇನೆ. ರಾಜನ ಮಗಳಾದ ನೀನೆಲ್ಲಿ? ಆ ಹುಣ್ಣಿನ ಮನುಷ್ಯನೆಲ್ಲಿ? ಆತನ ಹತ್ತಿರ ನೀನು ಹೇಗೆ ಮಲಗುವೆ? ಹೇಗೆ ಮುಟ್ಟುವೆ, ಬಾ ನಾವಿಬ್ಬರೂ ಇಲ್ಲಿಂದ ದೂರ ಹೋಗಿಬಿಡೋಣ"ಎಂದು ಅವಳ ಕೈ ಹಿಡಿಯಲು ಬಂದ. ಮೈನಾವತಿ ದೂರ ಸರಿದು "ಪಾಪಿ ನಾನು ಗಂಡುಳ್ಳಬಾಲಿ, ನೀಚಾ, ನನ್ನ ಗಂಡ ಯಾರೇ ಆಗಿರಲಿ, ಅವರ ಸೇವೆ ಮಾಡಿಕೊಂಡಿರುವುದು ನನ್ನ ಧರ್ಮ ನಡೆ ಆಚೆ" ಎಂದಳು. ನೀಲಕುಮಾರ ಕುದುರೆ ಹತ್ತಿ ಹೋದ. ಸ್ವಲ್ಪ ಸಮಯದ ನಂತರ ಹುಣ್ಣಿನ ಮನುಷ್ಯನಾಗಿ ಪುನಃ ಹಿಂದಿರುಗಿದ. "ಯಾವನೇ ಅವನು, ನಿನ್ನ ಹತ್ತಿರ ಬಂದು ಹೋದವನು ಎಷ್ಟು ದಿನಗಳಿಂದ ಈ ಆಟ ನಡೆದಿದೆ, ಹುಣ್ಣಿನ ಮನುಷ್ಯ ಅಂತ ನನ್ನ ಧಿಕ್ಕರಿಸಿದೆ, ನಾನು ಇಲ್ಲದಾಗ ಬೇರೆಯವರ ಸಂಗ ಮಾಡುತ್ತೀಯಾ? ಬೇಡವಾದರೆ ನಿಮ್ಮ ತಂದೆ ಹತ್ತಿರ

ಹೋಗಿ ಇರು" ಎಂದನು. ಮೈನಾವತಿ ಅವನ ಕಾಲು ಹಿಡಿದು "ನಾನು ಅಂಥವಳಲ್ಲಾರಿ, ನಾನು ಯಾವ ತಪ್ಪೂ ಮಾಡಿಲ್ಲ. ಅವನು ಯಾವನೋ ನನಗೆ ಗೊತ್ತಿಲ್ಲ. ನಿಮಗೆ ದ್ರೋಹ ಮಾಡಿ ನಾನು ಯಾವ ಪಾಪ ಕಟ್ಟಿಕೊಳ್ಳಲಿ" ಎಂದು ಅಳತೊಡಗಿದಳು. "ಸರಿ ಈ ಸಲ ಕ್ಷಮಿಸಿದ್ದೇನೆ, ಮುಂದೆ ಗೊತ್ತಾಗುತ್ತದೆ, ನನಗೆ ಹಸಿವಾಗಿದೆ ಊಟಕ್ಕೆ ಬಡಿಸು" ಎಂದು ಕರೆದನು.

ಮೈನಾವತಿ ಹಾಸಿಗೆ ಹಾಸಿ ತಾನೂ ಹಾಸಿಕೊಂಡು ಮಗುವನ್ನು ಪಕ್ಕದಲ್ಲಿ ಹಾಕಿಕೊಂಡು ಮಲಗಿದಳು. ನೀಲಕುಮಾರ ಎದ್ದು ಮೈನಾವತಿ ಹತ್ತಿರ ಮಲಗಲು ಹೋದ. "ಅಯ್ಯೋ ಬೇಡಿ ನೀವು ಗುಣವಾದ ಮೇಲೆ" ಎಂದಳು. ನೀಲಕುಮಾರ ಹೋಗಿ ತನ್ನ ಹಾಸಿಗೆಯಲ್ಲಿ ಉರುಳಿದ. ಆ ರಾತ್ರಿಯೆಲ್ಲಾ ಮೈನಾವತಿ ಕಣ್ಣೀರಿನಲ್ಲಿ ಮಲಗಿದಳು. ಬೆಳಕು ಹರಿಯಿತು. ಒಲ್ಲದ ಮನಸ್ಸಿನಿಂದ ನೀಲಕುಮಾರನ ಜಳಕಕ್ಕೆ ನೀರು ಕಾಯಿಸಿದಳು. ಆತನ ಮೈಯನ್ನು ಮುಟ್ಟಿ ತೊಳೆದಳು. ನೀಲಕುಮಾರ ಅವಳ ಸಂಕಟ ಅರ್ಥಮಾಡಿಕೊಳ್ಳುತ್ತಿದ್ದ.

ಮೈನಾವತಿ ಮಾಡುತ್ತಿದ್ದ ಅಡುಗೆ ರುಚಿಸದೆ ನೀಲಕುಮಾರ ಕುದುರೆ ಕಿವಿಯ ಸಾಮಾನುಗಳನ್ನು ತೆಗೆದು ನಿಜರೂಪ ತಾಳಿ ತನಗೆ ಬಯಸಿದ ಊಟ ಬಯಸಿದ. ಊಟ ತಯಾರಾಯಿತು. ಮಗು ಹೇಗೋ ಅಲ್ಲಿಗೆ ಬಂದಿತು. ನೀಲಕುಮಾರ ಅವನ ಕೈಯಲ್ಲಿ ಉಂಡೆ ಕೊಟ್ಟು ಕಳಿಸಿದ. ಮಗುವು ಉಂಡೆಯನ್ನು ಕೈಯಲ್ಲಿ ಹಿಡಿದುಕೊಂಡು ಭದ್ರಶೇಖರ ರಾಜನ ಹತ್ತಿರ ಬಂದಿತು. ಅವನ ಬಾಯಲ್ಲಿ ಉಂಡೆ ಇದ್ದಿತು. ಮೊಮ್ಮಗನ ಈ ತುಂಟತನದಿಂದ ಅದನ್ನು ತಿಂದನು. ತುಂಬಾ ರುಚಿಯಿತ್ತು. ಯಾರು ಮಾಡಿದ್ದೆಂದು ಕೇಳಿದ. 'ನಮ್ಮಪ್ಪ ಮಾಡಿದ್ದು ತಾತಾ 'ಎಂದಿತು. ಅವನು ಸಿಟ್ಟಿಗೆ ಬಂದು 'ಥೂ ಕತ್ತೆ, ಆ ಹುಣ್ಣಿನ ಮನುಷ್ಯ ಮಾಡಿದ್ದು ತಿನ್ನುವೆಯಾ' ಎಂದು ಹೊಡೆಯಲು ಹೋದ. ಅದು ತಪ್ಪಿಸಿಕೊಂಡು ಮನೆ ಸೇರಿತು. ಹುಣ್ಣಿನ ಮನುಷ್ಯನನ್ನು ಬೈದದ್ದಕ್ಕಾಗಿ ಬಾಯಿ ಹುಣ್ಣಾಯಿತು. ಅವನು ರೋಗಕ್ಕೆ ತುತ್ತಾಗಿ ನೆಲ ಹಿಡಿದ. ರಾಜ್ಯದ ಎಲ್ಲಾ ವೈದ್ಯರು ಬಂದು ಪರೀಕ್ಷಿಸಿದರೂ ಗುಣವಾಗಲಿಲ್ಲ.

ರಾಜ ಜ್ಯೋತಿಷ ತೆಗೆಸಿದ. ಜೋಯಿಸ ಹೊತ್ತಿಗೆ ನೋಡಿ "ಪ್ರಭು ಈ ರೋಗ ಗುಣವಾಗಬೇಕಾದರೆ ಏಳು ಮೆಟ್ಟಿನ ಹುಲಿಯ ಹಾಲು ಬೇಕೆಂದ".

ಮಾರನೆಯ ದಿನವೇ ಭದ್ರಶೇಖರ "ಏಳು ಮೆಟ್ಟಿನ ಹುಲಿಯ ಹಾಲನ್ನು ಯಾರು ತಂದುಕೊಡುತ್ತಾರೋ ಅವರಿಗೆ ನನ್ನ ಅರ್ಧರಾಜ್ಯ ಕೊಡುತ್ತೇನೆ" ಎಂದು ಡಂಗುರ ಸಾರಿಸಿದ. ಗಾದಿಗನಲ್ ಪರದಾನಿ ಬಾಯಲ್ಲಿ ನೀರೂರಿತು. ನಾನೇ ದಂಡನ್ನು ತೆಗೆದುಕೊಂಡು ಹೋಗಿ ಹಾಲನ್ನು ತರುತ್ತೇನೆಂದು ರಾಜನ ಅಪ್ಪಣೆ ಪಡೆದ. ಗಾದಿಗನಲ್ ಪರದಾನಿ ಮೈನಾವತಿಗೆ ಈ ಸುದ್ದಿ ತಿಳಿಸಿದ. ನೀಲಕುಮಾರ ಇದನ್ನು ಕೇಳಿ ಮೈನಾವತಿಯನ್ನು ಕರೆದು ನಿನ್ನ ತಂದೆಗೆ ನಾನು ಹುಲಿ ಹಾಲು ತರುತ್ತೇನೆ. ಕುದುರೆ ಮೇಲೆ ಹತ್ತಿಸು ಎಂದ. "ಎಲ್ಲಾದರೂ ಉಂಟೇನ್ರಿ ನೀವು ಹುಣ್ಣಿನ ಮನುಷ್ಯರು ಹೋಗಬೇಡಿ" ಎಂದಳು. "ಛೆ ಹುಚ್ಚಿ ಆ ಮಂತ್ರಿಯು ಏಳು ದಂಡು ಕರೆದುಕೊಂಡು ಹುಲಿಯ ಹಾಲನ್ನು ತಂದರೆ ನಾನು ಏಳು ಇಲಿಯನ್ನಾದರೂ ಹೊಡೆದು ತರುವೆ " ಎಂದನು. ಮೈನಾವತಿ ಒಲ್ಲದ ಮನಸ್ಸಿನಿಂದ ಕುದುರೆ ಮೇಲೆ ಹತ್ತಿಸಿದಳು.

ಮಂತ್ರಿಯು ತನ್ನ ಏಳು ದಂಡನ್ನು ಕರೆದು ಅರಣ್ಯ ತಿರುಗಿದ. ಇತ್ತ ನೀಲಕುಮಾರ ತನ್ನ ನಿಜ ಸ್ವರೂಪದಲ್ಲಿ ಗಾದಿಗನಲ್ ಪರದಾನಿ ಬರುವುದಕ್ಕಿಂತ ಮುಂಚೆಯೇ ಬಂದು ಸೇರಿದ. ದಟ್ಟವಾದ ಕಾಡಿನಲ್ಲಿ ಒಂದು ದೊಡ್ಡ ಹುಲಿಯು ನೋಡಿ ಸುಮ್ಮನೆ ಮಲಗಿತು. ಧೈರ್ಯದಿಂದ ಅದರ ಸಮೀಪ ಹೋಗಿ ಬಟ್ಟಲ ತುಂಬಾ ಹಾಲನ್ನು ಹಿಂಡಿದ. ಸುತ್ತಲೂ ನೋಡಿದ. ಪೊದೆಗಳ ಹಿಂದೆ ಹಾಳು ಗುಡಿ. ನೀಲಕುಮಾರ ಗುಡಿಯ ಹತ್ತಿರ ಹೋಗಿ ದಂಡನ್ನು ಕಾಯುತ್ತಾ ಕುಳಿತ.

ಸ್ವಲ್ಪ ಸಮಯದ ನಂತರ ಮಂತ್ರಿಯ ದಂಡು ಬಂದಿತು. ಕೆಲವರಿಗೆ ದಣಿವಾಗಿತ್ತು. ಕೆಲವರಿಗೆ ಹೆದರಿಕೆಯಾಗಿತ್ತು. ಮರದ ಕೆಳಗೆ ಮಲಗಿದ ಹುಲಿಯನ್ನು ನೋಡಿಯೇ ಕೆಲವರು ಓಟ ಕಿತ್ತರು. ಹುಲಿ ಬಾಯಿ ತೆರೆಯಿತು. ಎಲ್ಲರೂ ಥರ ಥರ ನಡುಗಿದರು. ಗಾದಿಗನಲ್ ಪರದಾನಿಗೆ ತಿಳಿಸಿದರು. ಹುಲಿ ಅವನನ್ನು ನೋಡಿ

ಮೈಕೊಡವಿತು. ಎದ್ದು ನಿಂತಿತು. ಪರದಾನಿ ಮರ ಹತ್ತಿ ಕುಳಿತ. ಅರ್ಧ ರಾಜ್ಯ ಹೋಗುತ್ತದೆ ಎಂದು ಯೋಚಿಸುವಾಗ ಯಾರೋ ಕೆಮ್ಮಿದಂತಾಯಿತು. ತಿರುಗಿ ನೋಡಿದ ನೀಲಕುಮಾರ ಅವನನ್ನು ಕರೆದ. ಅವನು ಕೆಳಗೆ ಇಳಿದುಬಂದ. ಇವನು ಯಾರೋ ದೇವತಾ ಪುರುಷನೇ ಇರಬೇಕೆಂದುಕೊಂಡನು. ಎಲ್ಲರೂ ಕೈ ಮುಗಿದರು. 'ನೀವ್ಯಾರು ಇಲ್ಲಿಗೇಕೆ ಬಂದಿರಿ' ಎಂದನು. ಪರದಾನಿ ಬಂದಕಾರಣ ತಿಳಿಸಿದ. 'ದಂಡನ್ನು ತಂದು ನಡುಗುತ್ತ ನಿಂತಿರಿ ಹುಲಿಯ ಹಾಲನ್ನು ನಾನು ಕೊಡುತ್ತೇನೆ ನೀವೇನು ಕೊಡುವಿರಿ ? ಎಂದನು. 'ಅಯ್ಯೋ ಕೊಡಪ್ಪಾ ನೀನು ಬಟ್ಟಲು ತುಂಬಾ ಹಾಲು ಕೊಟ್ಟರೆ ನಮ್ಮ ರಾಜನಿಂದ ಅರ್ಧರಾಜ್ಯ ಕೊಡಿಸುತ್ತೇವೆ' ಎಂದ ಪರದಾನಿ. 'ಆಗಲಿ ಕೊಡುತ್ತೇನೆ. ಎರಡು ದಿವಸ ಬಿಟ್ಟು ಬರುತ್ತೇನೆ. ಅರ್ಧ ರಾಜ್ಯ ಕೊಡಿಸಬೇಕು. ನಾನು ನಿಮಗೆ ಕೆಲಗುರುತು ಕೊಡುತ್ತೇನೆ ಬನ್ನಿ' ಎಂದು ಸಾಲಾಗಿ ನಿಲ್ಲಿಸಿ ಕಾದ ಕಬ್ಬಿಣದ ಬಳೆಯ ಬರೆ ಎಳೆದು ಹಾಲನ್ನು ಕೊಟ್ಟು ಎಚ್ಚರಿಸಿ ಕಳಿಸಿದ.

ಅವರು ಹೋದದ್ದೇ ತಡ ಇತ್ತ ತಾನು ಬೆಳ್ಳಿಕುದುರೆ ಹತ್ತಿ ಅವರಿಗಿಂತ ಮುಂಚೆ ಊರ ಹೊರಗೆ ಬಂದು ಹುಣ್ಣಿನ ಮನುಷ್ಯನಾದ. ಮನೆಗೆ ಬಂದು ಜೋಲು ಮುಖ ಹಾಕಿ ಕುದುರೆಯಿಂದ ಕೆಳಗಿಳಿದ. ' ಏನು ಬಾಳ ದಣಿದಿರಾ ?" ಎಂದು ಮೈನಾವತಿ ಕೇಳಿದಳು. " ಎಲ್ಲಾ ಕಡೆ ಸುತ್ತಿದೆ ಒಂದು ಇಲಿಯೂ ಸಿಗಲಿಲ್ಲ." ಎಂದು ಒಳಗೆ ಹೋದನು.

ಪರದಾನಿ ಹಾಲನ್ನು ತೆಗೆದುಕೊಂಡು ರಾಜನ ಹತ್ತಿರ ಹೋದ. ರಾಜ ನೋಡಿ ಸಂತೋಷಪಟ್ಟ. ಪರದಾನಿ ಹಾಲನ್ನು ಕುಡಿಸಿದ. ರಾಜ ಅವನನ್ನು ತುಂಬಾ ಹೊಗಳಿದ. ಗಾದಿಗನಲ್ ಪರದಾನಿ ಇದರಿಂದ ಉಬ್ಬಿದ.

ಹಾಲು ಕುಡಿದ ಒಂದೇ ದಿನದಲ್ಲಿ ರಾಜ ಗುಣಮುಖನಾದ. ಅವನ ಸಂತೋಷಕ್ಕೆ ಪಾರವೇ ಇಲ್ಲದಾಯಿತು. ಅದೇ ಸಮಯದಲ್ಲಿ ಮಂತ್ರಿ " ಪ್ರಭು, ಅರ್ಧರಾಜ್ಯದ ವಿಚಾರವೇನೆಂದ" ಭದ್ರಶೇಖರ ರಾಜ ಸಂಪೂರ್ಣಗುಣವಾದ ಕಾರಣ ಅರ್ಧರಾಜ್ಯ ಕೊಡಲು ಒಪ್ಪಿದ. ಮಾರನೇ ದಿನವೇ ಕೊಡುವುದಾಗಿ, ಅದಕ್ಕಾಗಿ ಸಕಲ ಸಿದ್ಧತೆ ಮಾಡಬೇಕೆಂದ. ಪರದಾನಿ ಇದರಿಂದ ಇನ್ನಷ್ಟು ಹಿಗ್ಗಿಹೋದ.

ಮಾರನೇ ದಿನ ನೀಲಕುಮಾರ ಈ ಸುದ್ದಿ ತಿಳಿದು ಬಂಗಾರದ ಮನುಷ್ಯನಾಗಿ ಬೆಳ್ಳಿ ಕುದುರೆಯನ್ನೇರಿ ಅರಮನೆಗೆ ಬಂದ. ನೀಲಕುಮಾರ ಬಂದ ಕೂಡಲೇ ಮಂತ್ರಿಯ ಎದೆ 'ಧಸ್' ಎಂದಿತು. ಕೋಪವು ನೆತ್ತಿಗೇರಿತು. ನೀಲಕುಮಾರ ಆರಮನೆ ಒಳಗೆ ಬರುವಾಗ ಅವನನ್ನು ತಡೆಯುವಂತೆ ಸೈನಿಕರಿಗೆ ಆದೇಶ ನೀಡಿದ. ಸೈನಿಕರು ತಡೆದರು. ಅವರನ್ನು ಒಂದೇ ಹೊಡೆತಕ್ಕೆ ಉರುಳಿಸಿದ. ಗಾದಿಗನಲ್ ಪರದಾನಿ ಅವನೊಡನೆ ಹೊಡೆದಾಡಿದ. ನೀಲಕುಮಾರ ಅವನನ್ನು ನೆಲಕ್ಕೆ ಉರುಳಿಸಿ ಒಳಗೆ ಬಂದ. ಆಸನದಲ್ಲಿ ಕುಳಿತಿದ್ದ ಭದ್ರಶೇಖರ ರಾಜ ಎದ್ದು ಬಂದು 'ಏನಪ್ಪಾ ಯಾರು ನೀನು ? ನಿನ್ನ ನೋಡಿದರೆ ಆನಂದವಾಗುತ್ತದೆ. ಸುಂದರವಾಗಿದ್ದಿಯಾ'' ನಾನು ಯಾರೇ ಆಗಿರಲಿ ನಿಮಗೆ ಏಳು ಮೆಟ್ಟಿನ ಹುಲಿಯ ಹಾಲನ್ನು ಹಿಂಡಿ ಕಳಿಸಿದವನು ನಾನೇ " ಎಂದ ನೀಲಕುಮಾರ. 'ಹುಚ್ಚಪ್ಪಾ ನಿನ್ನಂಥವರು ಹಾಲು ತರುವುದು ಉಂಟೇ? ತಂದದ್ದು ನಮ್ಮ ಗಾದಿಗನಲ್ ಪರದಾನಿ ತಂದಿದ್ದಾನೆ. ನೀನು ರಾಜ್ಯದ ಆಸೆಗಾಗಿ ಈ ರೀತಿ ಬಂದಿರಬೇಕು' ಎಂದು ರಾಜ ನಕ್ಕ. 'ಇಲ್ಲ ಪ್ರಭುಗಳೇ ನಾನೇ ನನ್ನ ಕೈಯಾರೆ ಈ ಹಾಲನ್ನು ಹಿಂಡಿ ಕೊಟ್ಟಿರುವೆನು' 'ಕೊಟ್ಟಿರುವುದಕ್ಕೆ ಗುರುತೇನು 'ಪ್ರಭು ಅವರಿಗೆ ಒಂದೊಂದು ಗುರುತು ಕೊಟ್ಟು ಕಳಿಸಿದ್ದೇನೆ ಪರೀಕ್ಷಿಸಿ", ಎಂದ ನೀಲಕುಮಾರ.

ರಾಜನಿಗೆ ಸೋಜಿಗವೆನಿಸಿತು. ಗಾದಿಗನಲ್ ಪರದಾನಿಯನ್ನು ರಾಜ ಕರೆಯಿಸಿದ. ಅವನು ಮುಖ ಎತ್ತಲಿಲ್ಲ. ತಪ್ಪು ಒಪ್ಪಿಕೊಂಡನು. ರಾಜ ಅವನಿಗೆ ದಂಡ ವಿಧಿಸಿದನು.

ಕೊಟ್ಟಮಾತಿಗೆ ತಪ್ಪದ ಭದ್ರಶೇಖರ ಸುತ್ತಲಿನ ಎಲ್ಲಾ ರಾಜರನ್ನು ಆಮಂತ್ರಿಸಿದ. ಅರ್ಧರಾಜ್ಯವನ್ನು ನೀಲಕುಮಾರನಿಗೆ ವಹಿಸಿದ. ಪಟ್ಟಾಭಿಷೇಕ ನಡೆಸಿದ. 'ಈ ಅರ್ಧರಾಜ್ಯವನ್ನು ಆಳಲು ನೀನೆ ತಕ್ಕವನು ಪ್ರಜೆಗಳನ್ನು ಸುಖವಾಗಿಡು' ಎಂದನು.

ನೀಲಕುಮಾರ ಹುಣ್ಣಿನ ಮನುಷ್ಯನಾಗಿ ಮೈನಾವತಿ ಹತ್ತಿರ ಹೋಗಿ ಪುನಃ ಹಿಂದೆ ಪರೀಕ್ಷಿಸಿದಂತೆ ಪರೀಕ್ಷಿಸಲು ಇದನ್ನು ಕಂಡ ಕುದುರೆ " ಕುಮಾರ ಪಾಪ ಮೈನಾವತಿ ನಿಜವಾದ ಪತಿಭಕ್ತಿ ಉಳ್ಳವಳು. ನಿನಗೆ ತಕ್ಕ ಹೆಂಡತಿ ದೊರಕಿದ್ದಾಳೆ. ಪೀಡಿಸಬೇಡ.

ಇನ್ನಾದರೂ ನಿಜರೂಪ ತೋರಿಸಿ ಸುಖವಾಗಿರು. ಇಲ್ಲವಾದರೆ ನಾನು ನಿನ್ನ ಬಿಟ್ಟು ಹೋಗುತ್ತೇನೆ. ನನ್ನ ಮಾತು ಕೇಳಿದರೆ ಸಾಯುವವರೆಗೂ ನಿನ್ನ ಜೊತೆ ಇರುತ್ತೇನೆ" ಎಂದಿತು.

ನೀಲಕುಮಾರ ಕುದುರೆಯ ಮಾತಿಗೆ ಎರಡು ಆಡದೆ ಅದರ ಬೆನ್ನು ಚಪ್ಪರಿಸಿ ಮುದ್ದುಕೊಟ್ಟನು. ಮೈನಾವತಿ ಹತ್ತಿರ ಹೋಗಿ ತಿಳಿಸಿ ತನ್ನ ನಿಜರೂಪ ತೋರಿಸಿದ. ಮೈನಾವತಿಗೆ ಕೂಡಲೇ ಆನಂದವಾಯಿತು. ಬಾಲ್ಯದ ನೆನಪನ್ನು ಇಬ್ಬರೂ ಮಾಡಿಕೊಂಡು ಅಪ್ಪಿಕೊಂಡರು. ಇದನ್ನು ನೋಡಿ ಕುದುರೆ ಕೆನೆಯಿತು. ತಮ್ಮ ಮಗನನ್ನು ಎತ್ತಿ ಮುದ್ದಾಡಿದರು.

ಮರುದಿನ ನೀಲಕುಮಾರ ಮೈನಾವತಿ ಮಗನನ್ನು ಬೆಳ್ಳಿಕುದುರೆ ಮೇಲೆ ಕೂಡಿಸಿಕೊಂಡು ರಾಜ ಬೀದಿಯಲ್ಲಿ ಹತ್ತಿ ಹೊರಟರು. ಓಡಾಡುತ್ತಿದ್ದ ಜನ ನಿಬ್ಬೆರಗಾಗಿ ನೋಡುತ್ತ ನಿಂತರು. ಕೆಲವರು ಅವರು ಅವರೇ ಮಾತಾಡಿಕೊಂಡರು. 'ಭದ್ರಶೇಖರ ರಾಜನ ಮಗಳು ಆ ಹುಣ್ಣಿನ ಮನುಷ್ಯನನ್ನು ಬಿಟ್ಟು ಏಳು ಮೆಟ್ಟಿನ ಹುಲಿ ಹಾಲನ್ನು ತಂದುಕೊಟ್ಟಿದ್ದವನನ್ನು ಕಟ್ಟಿಕೊಂಡಿದ್ದಾಳೆ. 'ಅಯ್ಯೋ ಅವಳು ಚಂಚಲಿ ರಾಜನಿಗೆ ಕಳಂಕ' ನಾನಾ ರೀತಿ ಮಾತಾಡಿಕೊಂಡರು. ಗಾದಿಗನಲ್ ಪರದಾನಿ ಈ ಸುದ್ದಿಯನ್ನು ರಾಜನಿಗೆ ತಿಳಿಸಿದ್ದ. ರಾಜನು ಕೆಂಡವಾಗಿ ಅವರನ್ನು ಹಿಡಿದು ತರಲು ಆದೇಶ ನೀಡಿದ.

ಪರದಾನಿ ಅವರನ್ನು ಕರೆದು ತಂದ. ರಾಜನು ಸಭೆ ಕರೆದ. ಸಭೆ ಸೇರಿದಾಗ ಮೈನಾವತಿ ಅಲ್ಲಿಗೆ ಬಂದಳು. ಭದ್ರಶೇಖರ ರಾಜ ಅವಳನ್ನು ನೋಡಿ ಕೆಂಡಕಾರಿದ. "ಈ ಕಳಂಕಿಗೆ ತಕ್ಕ ಶಿಕ್ಷೆ ಆಗಬೇಕು. ಇವಳನ್ನು ಕಾಡಿಗೆ ಕರೆದೊಯ್ದು ತಲೆ ಕತ್ತರಿಸಿ" ಎಂದು ಆದೇಶ ನೀಡಿದ. ನೀಲಕುಮಾರನ ಕಡೆ ತಿರುಗಿದಾಗ ರಾಜ ಚಕಿತನಾದ. ಅಲ್ಲಿ ಬಂಗಾರದ ಮನುಷ್ಯನ ಬದಲು ಹುಣ್ಣಿನ ಮನುಷ್ಯ ನಿಂತಿದ್ದ. ಬಂಗಾರದ ಮನುಷ್ಯ ಎಲ್ಲಿದ್ದರೂ

ಹುಡುಕಿ ತನ್ನಿ ಎಂದ ರಾಜ. ಅದಕ್ಕೆ ನೀಲಕುಮಾರ ಗಹಗಹಿಸಿ ನಕ್ಕನು. ಎಲ್ಲರೂ ಕುತುಹಲಗೊಂಡರು.

"ಪ್ರಭುಗಳೇ ಮೈನಾವತಿಯನ್ನು ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಬಂದವನು ನಾನೇ ಬೇರೆ ಯಾರು ಅಲ್ಲ" ಎಂದು ತನ್ನ ನಿಜರೂಪ ತೋರಿಸಿದನು. ಆಗ ಎಲ್ಲರಿಗೂ ಸೋಜಿಗವಾಯಿತು. ಇದುವರೆಗೂ ಹುಣ್ಣಿನ ಮನುಷ್ಯನಂತೆ ನಟಿಸಿದವನು ನಾನೆ. ಮೈನಾವತಿಯನ್ನು ಮದುವೆಯಾದವನು ನಾನೆ. ಮಗು ಹುಟ್ಟಲು ನಾನೇ ಕಾರಣ" ಎಂದು ನೀಲಕುಮಾರ ನಡೆದ ಎಲ್ಲಾ ಘಟನೆ ತಿಳಿಸಿದ.

ಭದ್ರಶೇಖರ ರಾಜನಿಗೆ ಸಂತಸವಾಯಿತು. ನೀಲಕುಮಾರನಿಗೆ ನೀನು ಯಾರು?ತಂದೆ, ತಾಯಿ ಯಾರು ? ಯಾವ ರಾಜ್ಯ ? ಎಂದು ಕೇಳಿದಾಗ ನೀಲಕುಮಾರ ಎಲ್ಲಾ ಘಟನೆಗಳನ್ನು ನೆನಪಿಸಿಕೊಂಡನು. " ಮುತ್ತುಶೆಟ್ಟಿ ನನ್ನ ತಂದೆ ಎದೇ ಪಟ್ಟಣದಲ್ಲಿದ್ದಾನೆ" ಎಂದನು. ರಾಜನು ಮುತ್ತುಶೆಟ್ಟಿಯನ್ನು ಹುಡುಕಿ ತರಲು ತಿಳಿಸಿದನು. ರಾಜ ಭಟ್ಟರು ಮುತ್ತುಶೆಟ್ಟಿಯನ್ನು ಕರೆತಂದರು. ನೀಲಕುಮಾರ ಆತನನ್ನು ಗುರುತಿಸಿದ. ಆದರೆ ಮುತ್ತುಶೆಟ್ಟಿ ಗುರುತಿಸಲಿಲ್ಲ. "ನಿನಗೆ ಮಕ್ಕಳಿದ್ದರೆ?" ಇಲ್ಲ ಪ್ರಭು ನನಗೆ ಒಬ್ಬ ಸಾಕು ಮಗ ಇದ್ದ. ಜಾತ್ರೆಯಲ್ಲಿ ಆಡಲು ಹೋದವನು ಮನೆಗೆ ಮರಳಲಿಲ್ಲ. ಇನ್ನೂ ಪತ್ತೆ ಆಗಿಲ್ಲ. ನನ್ನ ಆರು ಜನ ಹೆಂಡತಿಯರು ಆ ಹುಡುಗನ ವ್ಯಸನದಲ್ಲಿ ಇದ್ದಾರೆ ಎಂದ. "ಸಾಕು ಮಗು ಅಂದೆಲ್ಲ ಆ ಮಗು ನಿಮಗೆ ಹೇಗೆ ಸಿಕ್ಕಿತು. ಯಾರು ಕೊಟ್ಟು ಹೋಗಿದ್ದರು" ಎಂದಾಗ ಮುತ್ತುಶೆಟ್ಟಿ ಹಿಂದಿನ ಎಲ್ಲಾ ಘಟನೆಗಳನ್ನು ತಿಳಿಸಿದ. ಅಲ್ಲೇ ಇದ್ದ ಗಾದಿಗನಲ್ ಪರದಾನಿ ತಳಮಳಿಸಿದ. ಬೆಚ್ಚಿದ. ಜೀವ ಹೋದಂತಾಯಿತು.

ಈ ನೀಲಕುಮಾರ ಆ ಹುಡುಗನೇ ಇರಬೇಕು. ನಾನಿನ್ನು ಬದುಕಲಾರೆ ಇಲ್ಲಿಂದ ತಪ್ಪಿಸಿಕೊಳ್ಳಬೇಕು ಎಂದು ತಪ್ಪಿಸಿಕೊಳ್ಳಲು ಯತ್ನಿಸಿದ. ನೀಲಕುಮಾರ ಬೆನ್ನು ಹತ್ತಿ ಹಿಡಿದ.

ತನ್ನ ತಪ್ಪುಗಳನ್ನು ಒಪ್ಪಿಕೊಂಡ. ಪರದಾನಿ ಹಿಂದಿನ ಎಲ್ಲಾ ಘಟನೆಗಳನ್ನು ಸವಿಸ್ತಾರವಾಗಿ ತಿಳಿಸಿದ. ಚಿತ್ರಶೇಖರ ರಾಜನ ಮಗನೆಂದು ಕೇಳಿ ಭದ್ರಶೇಖರ ಹಿರಿ ಹಿರಿ ಹಿಗ್ಗಿದ.

ಭದ್ರಶೇಖರ ರಾಜ ಚಿತ್ರಶೇಖರನಿಗೆ ಸುದ್ದಿ ಕಳಿಸಿದ. ಚಿತ್ರಶೇಖರ ತನ್ನ ಪರಿವಾರ ಸಮೇತ ಬಂದ ತಮ್ಮ ಮಗನನ್ನು ನೋಡಿ ರಾಜ ದಂಪತಿಗಳು ಇಬ್ಬರೂ ಆನಂದ ಪಟ್ಟರು. ಈ ಎಲ್ಲಾ ಘಟನೆಗಳಿಗೆ ಕಾರಣನಾದ ಪರದಾನಿಯನ್ನು ಏನು ಮಾಡಬೇಕು ಎಂದು ಸಭೆಯಲ್ಲಿ ಮಂಡಿಸಿದರು. ಸಭೆಗೆ ಸಭೆಯೇ "ಈ ದ್ರೋಹಿಯನ್ನು ಹಿಡಿದು ತಲೆಬೋಳಿಸಿ ಕತ್ತೆ ಮೇಲೆ ಕೂಡಿಸಿ ಬೀದಿಯಲ್ಲಿ ಮೆರವಣಿಗೆ ಮಾಡಿ ಗುಡ್ಡೆ ಕಲ್ಲಿಗೆ ನಿಲ್ಲಿಸಿ ನೀಲಕುಮಾರ ಕಡಿಯಬೇಕು" ಎಂದರು.



ಪರದಾನಿಗೆ ಕತ್ತೆಯ ಮೇಲೆ ಕೂಡಿಸಿ ಮೆರವಣಿಗೆ ಮಾಡುತ್ತಿರುವುದು

ಸಭೆಯ ತೀರ್ಪಿನಂತೆ ಗಾದಿಗನಲ್ ಪರದಾನಿಯನ್ನು ಹಿಡಿದು ತಲೆ ಬೋಳಿಸಿದರು. ಕತ್ತೆ ಮೇಲೆ ಮೆರವಣಿಗೆ ಮಾಡಲಾಯಿತು. ಗುಡ್ಡೆ ಕಲ್ಲಿಗೆ ತಂದು ನಿಲ್ಲಿಸಿದರು. ಇಡೀ ಪಟ್ಟಣ ಪಟ್ಟಣವೇ ಬಂದು ನಿಂತಿತು. ನೀಲಕುಮಾರ ಎಲ್ಲರ ಎದುರಿಗೆ ಅವನನ್ನು ಕಡಿದ. ಅಂದಿಗೆ ನೀಲಕುಮಾರನ ಎಲ್ಲಾ ಕಂಠಕಗಳು ಪರಿಹಾರವಾದವು.

ಭದ್ರಶೇಖರ ರಾಜ ಇಡೀ ರಾಜ್ಯವನ್ನು ನೀಲಕುಮಾರನಿಗೆ ಒಪ್ಪಿಸಿದ. ಮುತ್ತು ಶೆಟ್ಟಿಯನ್ನು ತಮ್ಮ ರಾಜ ಪರಿವಾರದೊಂದಿಗೆ ಸೇರಿಸಿಕೊಂಡರು. ಅಂದಿನಿಂದ ನೀಲಕುಮಾರ ರಾಜ್ಯವನ್ನು ಆಳುತ್ತ ಪ್ರಜೆಗಳನ್ನು ಸುಖವಾಗಿ ಇಟ್ಟಿದ್ದ.

* * *



ಕನ್ನಡ ವಿಶ್ವವಿ
ುಟ್ಟದವರೆಗೆ ಉತ್ತಮ
ಹಾಗೂ ಉಪ
'ಪಠ್ಯಪುಸ್ತಕ ರಚನಾ
ವಿಭಾಗ'ವನ್ನು
ಪಠ್ಯಪುಸ್ತಕ ರಚನೆ
ಮಾಡಬೇಕೆಂಡ
ಖೆ. ನವಸಾಕ್ಷರರಿಗಾಗಿ
ಪುಸ್ತಕ ಬರೆಸು
ಯಕ್ಕೆ ವಹಿಸಿಕೊಟ್ಟರು.
ವಿಶ್ವವಿದ್ಯಾಲಯ
ಪ್ರಖ್ಯಾತ ಲೇಖಕರನ್ನು,
ಭಾಷಾತಜ್ಞರನ
ವರೆಲ್ಲರ ಅಭಿಪ್ರಾಯ,
ಸಲಹೆ, ಸಹಕಾ
ಷೆ, ಮುದ್ರಣ ವಿನ್ಯಾಸ,
ಚಿತ್ರಗಳ ಮಹ
ಅನೇಕ ಸಲ ಚರ್ಚಿಸಿ
ಯೋಜನೆಯನ

ನವಸಾಕ್ಷರರಿಗ
ಲೇ ಪ್ರಕಟವಾಗಿರುವ
ಪುಸ್ತಕಗಳನ್ನೆಲ್ಲ
ಲ್ಲ ಭಾಷಾತಜ್ಞರಿಂದ
ಪರಿಶೀಲಿಸಲಾ
ಮಿಸಿಕೊಂಡು ಅವರಿಗೆ
ಕಮ್ಮಟಗಳನ್ನು
ನ್ಯಂತ ಆಯ್ದ ಜಿಲ್ಲೆ,
ತಾಲೂಕುಗಳಿಗೆ ಕಳುಹಿಸಿ ಈ ಆಂದೋಲನದಲ್ಲಿ ಕಲಿತವರಿಂದ ಮತ್ತು ಕಲಿಯುತ್ತಿರುವವರಿಂದ ಅದರ ಗುಣದೋಷಗಳ ಬಗ್ಗೆ ಅಭಿಪ್ರಾಯ ಸಲಹೆಗಳನ್ನು ಸಂಗ್ರಹಿಸಿ, ಅನಂತರ ಅವುಗಳನ್ನೆಲ್ಲ ವಿಶ್ವವಿದ್ಯಾಲಯದ ಗಣಕಯಂತ್ರದಲ್ಲಿ ವಿಶ್ಲೇಷಿಸಲಾಯಿತು; ಮತ್ತೆ ಮತ್ತೆ ಕ್ಷೇತ್ರಗಳಿಗೆ ಹೋಗಿ, ಕ್ಷೇತ್ರ ಸಹಾಯಕರು ನೀಡಿದ್ದ ಮಾಹಿತಿಗಳನ್ನೆಲ್ಲ ಮರು ಪರಿಶೀಲನೆ ಮಾಡಿ, ನಂತರ ನವಸಾಕ್ಷರರ ಅಪೇಕ್ಷೆಗೆ ಅನುಗುಣವಾಗಿ ವಿಷಯದ ಆದ್ಯತೆಗಳನ್ನು ನಿರ್ಧರಿಸಿಕೊಂಡು ಪುಸ್ತಕ ರಚನೆಗೆ ತೊಡಗಲಾಯಿತು; ಪ್ರಖ್ಯಾತ ಲೇಖಕರು ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು